# ನನ್ನನ್ನು ನಾನೇ ಕಂಡೆ



ಅ.ನ. ಕೃಷ್ಣರಾಯ



ಪ್ರಕಾಶಕರು
ಪ್ರಗತಿಶೀಲ ಲೇಖಕರ ಸಂಘ, ಬೆಂಗಳೂರು
ಮತ್ತು
ಕರ್ನಾಟಕ ಸಾಹಿತ್ಯಮಂದಿರ, ಧಾರವಾಡ

೪೪ ]

[ ಬೆಲೆ ರೂ. ೧-೦-೦

# ಮುನ್ನುಡಿ

---

ಈ ಗ್ರಂಥದ ತಂತ್ರವನ್ನು ಕುರಿತು ಹೇಳಬೇಕಾದ ಎರಡು ಮಾತುಗಳನ್ನು ಗ್ರಂಥಾರಂಭದಲ್ಲಿಯೇ ಹೇಳಿದ್ದೇನೆ. ನಮ್ಮ ಜೀವನ, ಸಾಹಿತ್ಯ, ಸಾಮಾಜಿಕ ಸಮಸ್ಯೆಗಳ ಬಗ್ಗೆ ನಾನು ವಿಚಾರಮಾಡಿರುವುದನ್ನು ಜನತೆಯ ಮುಂದೆ ಇಡಲಾಗಿದೆ. 'ನನ್ನನ್ನು ನಾನೇ ಕಂಡೆ' ನಮ್ಮ ಜನರಲ್ಲಿ ಮೂಡಿರುವ ರೂಢಿಮೂಢ್ಯವನ್ನು ಸ್ವಲ್ಪವಾದರೂ ನಿವಾರಿಸಬಲ್ಲುದಾದರೆ ನನ್ನ ಶ್ರಮ ಸಾರ್ಥಕವಾಗುತ್ತದೆ.

ಈ ಗ್ರಂಥದಲ್ಲಿ ಬಂದಿರುವ ಮೊದಲಿನ ಮೂರು ಅಧ್ಯಾಯಗಳು ಗೆಳೆಯ ಬಸವರಾಜ ಕಟ್ಟೀಮನಿ ನಡಸುತ್ತಿರುವ 'ಉಷಾ' ಪತ್ರಿಕೆಯಲ್ಲಿ ಪ್ರಕಟವಾಗಿವೆ. ಉಳಿದವುಗಳನ್ನು ಹೊಸದಾಗಿ ಬರೆದಿದ್ದೇನೆ.

ಬೆಂಗಳೂರಿನ ಪ್ರಗತಿಶೀಲ ಲೇಖಕರ ಸಂಘದವರು ಇದನ್ನು ತಮ್ಮ ಪ್ರಕಟನೆಯನ್ನಾಗಿ ಮಾಡಿಕೊಂಡಿದ್ದಾರೆ. ಧಾರವಾಡದ ಕರ್ನಾಟಕ ಸಾಹಿತ್ಯ ಮಂದಿರದ ಒಡೆಯರು ಪ್ರಕಟನೆಯ ಭಾರ ಹೊತ್ತಿದ್ದಾರೆ.

**ಅ. ನ. ಕೃಷ್ಣರಾಯ,**
ಅಧ್ಯಕ್ಷ,
"ಪ್ರಗತಿಶೀಲ ಲೇಖಕರ ಸಂಘ"
ಬೆಂಗಳೂರು.

"ಅನ್ನಪೂರ್ಣ"
ವಿಶ್ವೇಶ್ವರಪುರ, ಬೆಂಗಳೂರು.
೨೨-೬-೧೯೪೪.

## ಪರಿವಿಡಿ

# ನನ್ನನ್ನು ನಾನೇ ಕಂಡೆ

ಲೇಖನದ ವಿಷಯ ಸ್ವಲ್ಪ ವಿಚಿತ್ರವಾಗಿ ಕಾಣಬಹುದು. ಪತ್ರಿಕಾ ವೃತ್ತಿ ಬೆಳೆದ ಮೇಲೆ ವ್ಯಕ್ತಿಗಳನ್ನು ಸಂದರ್ಶಿಸಿ, ಅವರ ವಿಚಾರಗಳನ್ನು ಸಂಗ್ರಹಿಸುವ ಪದ್ಧತಿ ಪ್ರಚಾರಕ್ಕೆ ಬಂತು. ಆದರೆ, ಸ್ವಯಂ — ಸಂದರ್ಶನ ಹೆಚ್ಚು ರೂಢಿಯಲ್ಲಿಲ್ಲ. ಆತ್ಮ ಕಥೆಗಳನ್ನೂ, ಆತ್ಮ ಚರಿತ್ರೆಗಳನ್ನೂ ಈ ಪಂಕ್ತಿಗೆ ಸೇರಿಸಬಹುದು. ವಚನಗಳು, ಮಾರ್ಕಸ್ ಅರಿಲಿಯಸ್, ಪ್ಯಾಸ್ಕಲ್, ರಾಕಫೋ ಇವರ ಸೂಕ್ತಿಗಳನ್ನು ಈ ಗುಂಪಿಗೆ ಸೇರಿಸಬಹುದು. ಬರ್ನಾರ್ಡ್ ಷಾನ ಪ್ರತಿಯೊಂದು ಲೇಖನವೂ ಸ್ವಯಂ ಸಂದರ್ಶನ ಕಲೆಯ ನಿದರ್ಶನವಾಗಿದೆ.

ಟಾಲ್‌ಸ್ಟಾಯ್, ಗಾರ್ಕಿ, ಗಾಂಧಿಯವರಂತೆ ಆತ್ಮವೃತ್ತಕಾರರು ಸತ್ಯಪ್ರಿಯತೆಯನ್ನು ತೋರುವುದು ವಿರಳ. ತಾವಿರುವುದಕ್ಕಿಂತ ಒಂದು ಅಡಿಯಾದರೂ ಎತ್ತರವಿರುವಂತೆ ಕಾಣಿಸಿಕೊಳ್ಳಬೇಕೆಂಬುದು ಮಾನವ ಚಾಪಲ್ಯ. ಸಾಮಾನ್ಯವಾಗಿ ತನ್ನ ವಿಷಯ ತಾನೇ ಬರೆದುಕೊಳ್ಳುವ ಯಾವ ವ್ಯಕ್ತಿಯೂ ಲೋಕದ ದೃಷ್ಟಿಗೆ ಕಾಣದಿರುವ ಕೆಲವು ವಿಷಯಗಳನ್ನು ಕೂಲಂಕಷವಾಗಿ ಹೇಳಲಾಗುವುದಿಲ್ಲ. ತನ್ನನ್ನು ದೊಡ್ಡವನೆಂದು ಭಾವಿಸಿರುವ ಜನ ಎಲ್ಲಿ ಸಣ್ಣವನೆಂದು ತಿಳಿದುಬಿಡುತ್ತಾರೋ ಎಂಬ ಭಯ. ಪ್ರಿಯ ಜನರಿಗೆ ವ್ಯಥೆಯನ್ನುಂಟುಮಾಡಬೇಕಾಗುವುದಲ್ಲಾ ಎಂಬ ಕೊರಗು ಅಥವಾ ರಸ ನಿಮಿಷಗಳಿಂದ ಚಿಮ್ಮಿದ ಕೆಲವು ಅನುಭವಗಳನ್ನು ಸಂತೆಯ ಮಂದಿಯ ಮುಂದೆ ಇಡಲಿಚ್ಛಿಸದ ಮನೋಭಾವ ಕಾರಣವಾಗುತ್ತದೆ. ಅದಕ್ಕೇ ಲೇಖಕರು ಅಂದ ಚೆಂದದ ಉಡುಗೆ ತೊಡುಗೆ ಹಾಕಿ ತಮ್ಮ ವಿಚಾರ ಏನೇ ಆದರೂ ಸರ್ ಜೆ. ಮ್ಯಾಕಿಂಟಾಷ್ ಹೇಳುವಂತೆ * ಮಾನವರು ತಮ್ಮ ಅಭಿಪ್ರಾಯಗಳಷ್ಟು ಒಳ್ಳೆಯವರೂ ಅಲ್ಲ. ಕೆಟ್ಟವರೂ ಅಲ್ಲ ಎನ್ನುವ ಮಾತನ್ನು ಮರೆಯಬಾರದು.

---

* "Men are never so good or bad as their opinions"

ಕಂಡದ್ದು ಮೊದಲನೆಯ ಸಲ

# ಸಾಹಿತ್ಯ ಸೇವೆ

ಕನ್ನಡದ ಸಿದ್ಧ-ಪ್ರಸಿದ್ಧ ಲೇಖಕರಾದ ಅ. ನ. ಕೃಷ್ಣರಾಯರನ್ನು ಸಂದರ್ಶಿಸಿ ಮಾತನಾಡಬೇಕೆಂಬ ಆಸೆ ನನ್ನ ಮನಸ್ಸಿನಲ್ಲಿ ಬಹಳ ದಿವಸ ದಿಂದಿತ್ತು. ಆದರೆ ಅಂತಹ ವ್ಯಕ್ತಿಯನ್ನು ನೋಡುವುದಕ್ಕೆ ಭಯ. ಅದು ಮೂರು ಕಣ್ಣಿನ ರುದ್ರಮೂರ್ತಿ. ಒಂದು ದಿನ ಧೈರ್ಯ ಮಾಡಿದೆ. ಕುಳಿತು ವಿಸ್ತಾರವಾದ ಒಂದು ಕಾಗದ ಬರೆದೆ. ಅವರನ್ನು ಷಾ, ಹಾರ್ಡಿ, ಗಾರ್ಕಿ ಯವರಿಗೆ ಹೋಲಿಸಿ, ಬಂದು ಕಾಣಲು ಅವಕಾಶ ಕೊಡಬೇಕೆಂದು ಪ್ರಾರ್ಥಿಸಿ ಕೊಂಡೆ. ನಾಲ್ಕಾರು ದಿವಸ ಕಾದೆ, ಮಾರುತ್ತರ ಬರಲಿಲ್ಲ. ಮತ್ತೆ ಎಕ್ಸ್‌ಪ್ರೆಸ್ ಡಿಲಿವರಿ ಹಾಕಿ ಇನ್ನೊಂದು ಕಾಗದ ಬರೆದೆ. ಅದಕ್ಕೂ ಉತ್ತರವಿಲ್ಲ. ಅವರ ಬಗ್ಗೆ ಅಂಜಿದ್ದ ನನಗೆ ಭಯ ಮತ್ತಷ್ಟು ಹೆಚ್ಚಿತು. ಗೌರವವೂ ಬೆಳೆಯಿತು.

ಕೊನೆಗೆ ಧೈರ್ಯ ಮಾಡಿ ಅವರ ಮನೆಯ ಕಡೆ ಹೋದೆ. ಒಳಗೆ ಹೋಗುವುದಕ್ಕೆ ಧೈರ್ಯವಾಗದು. ಅತ್ತಿತ್ತ ಕೆಲ ಸಾರಿ ಸುಳಿದಾಡಿ ಒಳಗೆ ಕಾಲಿಟ್ಟು ಎದುರಿಗೆ ಸಿಕ್ಕಿದ ಒಬ್ಬ ಹುಡುಗನನ್ನು

'ಕೃಷ್ಣರಾಯರು ಇದ್ದಾರೆಯೇ?' ಎಂದು ಕೇಳಿದೆ.

'ಇದ್ದಾರೆ, ಕುಳಿತುಕೊಳ್ಳಿ' ಎಂದವನು ಹೇಳಿ ಒಳಗೆ ಹೋದ.

ವರಾಂಡದಲ್ಲಿ ಕುಳಿತುಕೊಂಡೆ. ಎದುರಿಗೆ ಸುಂದರವಾದ ಎರಡು ಅಜಂತಾ ಚಿತ್ರಗಳು, ಅತ್ತಿತ್ತ ಒಂದು ಓಂಕಾರ ಚಿತ್ರ, ಒಂದು ಶಿವತಾಂಡವ ಚಿತ್ರ. ಕಲಾವಿದ ಕೃಷ್ಣರಾಯರ ಮನೆಗೇ ಬಂದಿದ್ದೇನೆಂದು ಧೈರ್ಯ ವಾಯಿತು.

ಸ್ವಲ್ಪ ಹೊತ್ತು ಕಳೆಯಿತು. ಒಂದು ಹುಡುಗ ವ್ಯಕ್ತಿ ಬಂದಿತು. ಕೈಯ್ಯಲ್ಲಿ ಹಚ್ಚಿದ ಸಿಗರೇಟು.

'ಯಾರು ನೀವು-ಯಾರು ಬೇಕಾಗಿತ್ತು?'

'ಕೃಷ್ಣರಾಯರನ್ನು ನೋಡುವುದಕ್ಕೆ ಬಂದೆ'

'ಬನ್ನಿ ಒಳಗೆ'

ಎಂದು ಒಂದು ಕೋಣೆಗೆ ಕರೆದೊಯ್ದ ಆ ವ್ಯಕ್ತಿ.

ಅದನ್ನು ಕೋಣೆಯೆನ್ನುವುದಕ್ಕಿಂತ ಹಳೆಯ ಸಾಮಾನಿನ ಹರಾಜು ಅಂಗಡಿ ಎಂದು ಕರೆಯಬಹುದು. ಕೋಣೆಯ ತುಂಬ ಸಿಗರೇಟಿನ ತುಂಡುಗಳು, ಕೋಣೆಯ ಸುತ್ತ ಬಡು. ಅದರ ಮೇಲೆ ಅಳತೆ ಮೀರಿ ಒಟ್ಟಿದ್ದ ಪುಸ್ತಕದ ರಾಶಿ, ಪುಸ್ತಕದ ಭಾರ ತಾಳಲಾರದೆ ತಾಯಿ ವಸುಂಧರೆಯಂತೆ ಬಡು ಜಗ್ಗುತ್ತಿತ್ತು. ಅದರ ಕೆಳಗೇ ಒಂದು ಮೇಜು, ಕುರ್ಚಿ. ಕೃಷ್ಣರಾಯರು ಅಲ್ಲಿಯೇ ಕುಳಿತು ಬರೆಯುವುದಾದರೆ ಅವರ ರುಂಡ, ಮುಂಡ ಬಹಳ ದಿವಸ ಕೂಡಿ ಇರುತ್ತದೆ ಎಂದು ನನಗನಿಸಲಿಲ್ಲ. ಮೇಜಿನ ಮೇಲೆ ಮತ್ತೆ ಪುಸ್ತಕದ ರಾಶಿ, ಒಂದು ಟೈಪ್‌ರೈಟರ್, ಬರೆಯುವ ಸಾಮಗ್ರಿಗಳು, ಬೀಗ, ಗೋಂದು, ಮಸಿ ಕುಡಿಕೆ, ಒಂದು ರಾಶಿ ಕಾಗದ, ಅರೆ ಬರೆದ ಹಸ್ತಪ್ರತಿ, ಸಿಗರೇಟ್ ಭೂದಿ ತುಂಬುವ ಗಾಜಿನ ಪಾತ್ರೆ ಇತ್ಯಾದಿ ಇತ್ಯಾದಿ. ಕೋಣೆಯಲ್ಲಿ ಒಂದು ಅಲ್ಮೀರಾ, ಗೋಡೆಗೆ ಹಚ್ಚಿದ ಗಾಜಿನ ಅಲ್ಮೀರಾ, [illegible] ಪುಸ್ತಕ ಕಪಾಟು ಅವುಗಳಲ್ಲಿಯೂ ತುಂಬಿ ತುಳುಕುತ್ತಿದ್ದವು ಪುಸ್ತಕಗಳು. ಇದೊಂದು ಪುಸ್ತಕ ಪಿಶಾಚಿಯ ಗುಹೆಯಂತಿತ್ತು,

ಚೀನೀಯರ ಅಫೀಮಿನಾಲಯದಂತೆ ಸಿಗರೇಟ್ ಹೊಗೆಯ ಕಮಟು ವಾಸನೆ ರೂಮಿನಲ್ಲಿ ತುಂಬಿತ್ತು. ಹೊಗೆಯಿಂದ ಕೋಣೆಯ ಗೋಡೆಗಳು ಕಪ್ಪಿಟ್ಟಿದ್ದವು.

ನನ್ನನ್ನು ಕೋಣೆಗೆ ಕರೆ ತಂದಿದ್ದ ವ್ಯಕ್ತಿಯನ್ನು ಕುರಿತು

'ಕೃಷ್ಣರಾಯರು ಬರುತ್ತಾರೆಯೇ?'

ಆ ವ್ಯಕ್ತಿ ನಕ್ಕುಬಿಟ್ಟ.

'ನಾನು ಯಾರೆಂದು ಭಾವಿಸಿರುವಿರಿ, ನಾನೇ ಕೃಷ್ಣರಾಯ.'

ನನ್ನ ಕಣ್ಣನ್ನು ನಾನೇ ನಂಬದಾದೆ. ನನ್ನ ಕನಸಿನ ಮೂರ್ತಿ, ಆ ಸತ್ಯಕಾಮಿ, ಹಲವು ಹೋರಾಟಗಳ ಆ ಕಥೆಗಳ ಕೃಷ್ಣರಾಯರಿವರೆ, ಈ ಅಕಸ್ಮಾತ [illegible]. [illegible]. ಕೆದರಿದ ತಲೆಗೂದಲಿನ

ಈ ಕಾಪು ಮನುಷ್ಯನೆಲ್ಲಿ ಎಂದುಕೊಂಡು

'ತಮ್ಮನ್ನಲ್ಲ ನಾನು ಕಾಣಲು ಬಂದದ್ದು, ಕೃಷ್ಣರಾಯರನ್ನು.'

ವ್ಯಕ್ತಿ ಗಹಗಹಿಸಿ ನಕ್ಕು 'ಕಲ್ಪನೆಗಿಂತ ಸತ್ಯ ಸೋಜಿಗವಾದದ್ದಲ್ಲವೇ?'

'ಏಕೆ?'

'ಕೃಷ್ಣರಾಯರೆಂದರೆ ೫೦, ೬೦ ವರ್ಷ ವಯಸ್ಸಿನ ಒಬ್ಬ ಹಿರಿ ಮನುಷ್ಯ. ತಲೆಗೆ ಶಾಲು ಸುತ್ತಿಕೊಂಡು, ದಪ್ಪ ಕನ್ನಡಕ ಹಾಕಿಕೊಂಡು ಗಂಭೀರವಾಗಿ ಕಾಣುವ ಪ್ರಾಣಿ ಎಂದು ನೀವು ಕಲ್ಪಿಸಿಕೊಂಡು ಬಂದ ಹಾಗೆ ಕಾಣುತ್ತದೆ.'

'ನಿಜ, ಆದರೂ ನಿಮಗೆ ಹೇಗೆ ಗೊತ್ತು?'

'ನನ್ನನ್ನು ನೋಡಲು ಬರುವವರೆಲ್ಲಾ ಹಾಗೇ ತಿಳಿದುಕೊಂಡು ಬರುತ್ತಾರೆ. ನಿಮಗೆ ಆಶಾಭಂಗವಾಯಿತಲ್ಲವೇ?'

'ಆಶಾಭಂಗವಲ್ಲ—ರಸಾಭಾಸ'

'ನೀವು ಯಾರು?—ಏನು ಬಂದಿರಿ?'

'ನಾನು ಕೃಷ್ಣರಾಯ—ಅಲ್ಲ ನಿಮ್ಮ ಅಭಿಮಾನಿ. ಕಾಗದ ಬರೆದಿದ್ದೆ, ನಿಮ್ಮಿಂದ ಉತ್ತರ ಬರಲಿಲ್ಲ.'

ಹೌದು, ಕಾಗದ ಬಂದಿತ್ತು. ನೀವೇ ಬಂದುಬಿಟ್ಟಿರಲ್ಲಾ.'

'ನಿಮಗೆ ತೊಂದರೆಯಾಯಿತೆ?'

'ತೊಂದರೆಯೇನೂ ಇಲ್ಲ. ಅರ್ಧ ಮುಗಿಸಿರುವ ಒಂದು ಕಾದಂಬರಿಗೆ ಕೈ ಹಚ್ಚಿದ್ದೆ. ಪ್ರಕಾಶಕರ ವರಾತ ಹೆಚ್ಚಾಗಿದೆ. ಅದು ಮುಗಿಯಲಿಲ್ಲ ವೆಂದರೆ ತಪ್ಪು ನಿಮ್ಮ ಮೇಲೆ ಹಾಕಿಬಿಡುತ್ತೇನೆ.'

'ಯಾವ ಕಾದಂಬರಿ?'

'ನಟ- ಸಾರ್ವಭೌಮ'

'ನಾಟಕದ ಮೇಲೇ?'

'ಹೌದು, ನಾಟಕ- ಜೀವನದ ಮೇಲೆ.'

'ಜೀವನ-ನಾಟಕ ಬರೆದವರು ನೀವೇ ಅಲ್ಲವೇ?'

'ಅಲ್ಲ'

'ಅದನ್ನು ಯಾರು ಬರೆದರು?'

'ಡೈರೆಕ್ಟರ್ ವಹಾಬರು ಮತ್ತು ನಿರ್ದೇಶಕ ವೀರಣ್ಣನವರು'

'ಹಾಗಾದರೆ ಜೀವನ-ನಾಟಕದಲ್ಲಿ ನೀವೇನು ಮಾಡಿದಿರಿ?'

'ಕನ್ನಡ ಚಿತ್ರ ಕೆಡಿಸಿ, ಚಿತ್ರ ಪ್ರಪಂಚದಲ್ಲಿ ಕನ್ನಡಕ್ಕಿರುವ ಭವಿಷ್ಯವನ್ನು ಹಾಳುಮಾಡಬೇಡಿರೆಂದು ಶಂಖ ಹೊಡೆದೆ.'

'ಜೀವನ ನಾಟಕ ಚೆನ್ನಾಗಿಯೇ ಇದೆಯಲ್ಲಾ?'

'ಅದು ನಿಮ್ಮ ಔದಾರ್ಯ.'

ಎಂದು ಒಂದು ಸಿಗರೇಟನ್ನಿತ್ತರು. ನನಗೆ ಸಿಗರೇಟಿನ ಚಟವಿಲ್ಲದಿದ್ದರೂ ಈ ಧೂಮಕೇತುವಿನ ಮುಂದೆ 'ಸುಮಾರಾಗಬಾರದೆಂದು' ಹಚ್ಚಿದೆ. ರಾಯರಂತೂ ಒಂದರಿಂದಲೇ ಇನ್ನೊಂದನ್ನು ಹಚ್ಚಿಕೊಂಡು ಪ್ಯಾಕೆಟ್ಟನ್ನು ಧ್ವಂಸ ಮಾಡುತ್ತಿದ್ದರು. ಕಾಫಿ ಬಂತು, ಇಬ್ಬರೂ ಮುಗಿಸಿ ಕುಳಿತೆವು.

'ನಿಮ್ಮದು ಇದುವರೆಗೆ ೨೦ ಪುಸ್ತಕಗಳವರೆಗೆ ಅಚ್ಚಾಗಿದೆಯಲ್ಲವೇ?'

'ಹೌದು'

'ಹಾಗಾದರೆ ನೀವು ಇದುವರೆಗೆ ಸಾವಿರಾರು ರೂಪಾಯಿಗಳನ್ನು ಸಂಪಾದಿಸಿರಬಹುದು.'

'ಈ ಮನೆ ನೋಡಿ ಹೇಳುತ್ತಿದ್ದೀರಾ? ಇದನ್ನು ನಾನು ಕಟ್ಟಲಿಲ್ಲ, ನಮ್ಮ ತಂದೆಯವರು ಕಟ್ಟಿದರು. ನನ್ನ ಆಸ್ತಿಯೆಂದರೆ ನೀವು ನೋಡುತ್ತಿರುವ ಈ ಪುಸ್ತಕಗಳ ರಾಶಿ.'

'ನಿಮ್ಮ ಪುಸ್ತಕಗಳಿಂದ ಏನೂ ಬರಲಿಲ್ಲಿವೇ?'

'ಬಂದಿದೆ - ಡಾಕ್ಟರ್ ಬಿಲ್ಲುಗಳು.'

'ನಿಮ್ಮ ಪುಸ್ತಕಗಳು ಬಹಳ ಚೆನ್ನಾಗಿ ಮಾರಾಟವಾಗುತ್ತವಲ್ಲಾ.'

'ಅದನ್ನು ಕೇಳಿ ನನಗೆ ಸಂತೋಷವಾಗಿದೆ.'

'ಈ ಪರಿಸ್ಥಿತಿಯಲ್ಲಿ ಇನ್ನೆಷ್ಟು ದಿವಸ ಸಾಹಿತ್ಯ ಸೇವೆ ಮಾಡಬಲ್ಲಿರಿ.'

'ಉಸಿರು ಮೆತ್ತಗಾಗುವ ತನಕ.'

'ಅದಕ್ಕೆ ಬಹಳ ದಿವಸ ಉಳಿದಿಲ್ಲವೆಂದು ಕಾಣುತ್ತದೆ. ನೀವು ಸಿಗ

ರೇಟ್ ಹಚ್ಚುವ ರೀತಿ ನೋಡಿದರೆ ಬಹಳ ದಿವಸ ಬದುಕಬೇಕೆಂಬ ಆಸೆಯೂ ನಿಮಗಿರುವ ಹಾಗಿಲ್ಲ.'

'ಸತ್ಯವಾದ ಮಾತು.'

'ಕನ್ನಡದ ಹಿರಿಯರು ಯಾರೂ ನಿಮಗೆ ಸಹಾಯ ಮಾಡುವುದಿಲ್ಲವೇ?'

'ಮಾಡುತ್ತಾರೆ. ನಾನು ಮಾಡುವ ಪ್ರತಿಯೊಂದು ಕೆಲಸವನ್ನೂ ತೀಕ್ಷ್ಣ ದೃಷ್ಟಿಯಿಂದ ನೋಡುತ್ತಾರೆ.'

'ಇದರಿಂದ ನಿಮ್ಮ ಮನಸ್ಸಿಗೆ ತುಂಬ ವ್ಯಥೆಯಾಗಿರಬಹುದು.'

'ವ್ಯಥೆಯಲ್ಲ — ಸ್ಫೂರ್ತಿಯಾಗಿದೆ. ಹಾಗೆ ನನ್ನನ್ನು ಹಳಿಯುವವರೇ ನನ್ನ ಹಿರಿಯ ಮಿತ್ರರು. ಜನರ ತೆಗಳಿಕೆ ಹೊಗಳಿಕೆಗಳ ಮೇಲೆ ಲೇಖಕನ ಸಾಹಿತ್ಯ ಕ್ರಿಯೆ ಅವಲಂಬಿಸಿದರೆ ಅವನು ಯಾವ ಪುರುಷಾರ್ಥಕ್ಕೆ ಬರೆಯಬೇಕು.'

'ಹಿರಿಯರಿಗೆ ನಿಮ್ಮನ್ನು ಕಂಡರೆ ಇಷ್ಟು ಕೋಪವೇತಕ್ಕೆ?'

'ಅನೇಕ ಕಾರಣಗಳಿವೆ.'

'ಹೇಳುತ್ತೀರಾ?'

'ಮೊದಲನೆಯದು ನಾನು ಅವರ ದಾಸೋಹವನ್ನು ಮಾಡುವುದಿಲ್ಲ. ಸಾಹಿತ್ಯ ಸಾಮ್ರಾಜ್ಯ ನನಗೆ ಸಾಮ್ಯವಾದೀ ಜಗತ್ತು. ಇಲ್ಲಿ ದೊಡ್ಡವರು ಚಿಕ್ಕವರನ್ನಾಗಿ ಮಾಡುವುದು ಅವರವರ ಕೃತಿಗಳು. ಸರ್ಕಾರಿ ಅಧಿಕಾರ, ಕಾಲೇಜು ಪ್ರೊಫೆಸರ್‌ಗಿರಿ, ಶ್ರೀಮಂತಿಕೆ, ಬೆಂಗಳೂರು ಪ್ರೆಸ್ ಮುದ್ರಣಗಳಲ್ಲ. ನಮ್ಮ ಸಾಹಿತ್ಯ ಪ್ರಪಂಚ ಹಳೆಯದನ್ನೇ ಹೊಸದಾಗಿ ಹೇಳುವ ಒಂದು ಕೂಗು ಬಂಡೆ. ಅದಕ್ಕೆ ಓ ಕೊಟ್ಟವರೇ ಯೋಗ್ಯರು. ಕಿರಿಯ ಲೇಖಕರು ತಮ್ಮ ಪ್ರತಿಚ್ಛಾಯೆಗಳಾಗಬೇಕೆಂದು ಹಿರಿಯರ ಬಯಕೆ. ಅವರು ಗ್ರೀಕ್ ನಾಟಕಗಳನ್ನು ಅನುವಾದ ಮಾಡಿದರೆ ನಾವೂ ಮಾಡಬೇಕು; ಅವರು ಸರಳ ರಗಳೆ, ಸಾನೆಟ್‌ಗಳನ್ನು ಬರೆದರೆ ನಾವೂ ಬರೆಯಬೇಕು. ಅವರು ಯಾವ ಕವಿಯ ಬಗ್ಗೆ ಏನು ಅಭಿಪ್ರಾಯ ಕೊಡುತ್ತಾರೋ ಅದನ್ನು ನಾವೂ ಪ್ರತಿಧ್ವನಿಸಬೇಕು. ಹಾಗೆ ಮಾಡಲೊಪ್ಪದ

ನನ್ನಂತಹವರು ಪಟಿಂಗರು.'

'ಕಿರಿಯರು ಸಾಹಿತ್ಯದಲ್ಲಿ ಹೇಗೆ ಬೆಳೆಯಬೇಕೆನ್ನುತ್ತೀರಿ?'

'ಅವರ ಪ್ರವೃತ್ತಿ ಇದ್ದ ಹಾಗೆ. ಸಾಹಿತ್ಯ ಸೃಷ್ಟಿಗೆ ಬೇಕಾದ ಮೊದಲನೆಯ ಗುಣ ಸ್ವಚ್ಛಂದವೆನಿಸುವಷ್ಟು ಸ್ವಾತಂತ್ರ್ಯ, ವಿಚಾರ ಸ್ವಾತಂತ್ರ್ಯ, ಮತ್ತು ಉಚ್ಚಾರ ಸ್ವಾತಂತ್ರ್ಯ. ಅದು ಯಾರಿಗೆ ಸಾಧ್ಯವಿಲ್ಲ ಅವರು ಕಾಗದ ಮಸಿ ಹಾಳು ಮಾಡಬಾರದು.'

'ಹಿರಿಯರ ಕೋಪದ ಎರಡನೆಯ ಕಾರಣ ಯಾವುದು?'

'ಅವರ ಮೇಲ್ಪಂಕ್ತಿಯನ್ನು ನಾವು ಅವರಿಗಿಂತ ಹೆಚ್ಚು ನಿಷ್ಠೆಯಿಂದ ಅನುಸರಿಸುವುದು.'

'ಹಾಗೆಂದರೆ?'

'ವಿವರಿಸುತ್ತೇನೆ. ಕನ್ನಡ-ಹಿಂದೀ ವಾದವನ್ನು ಆರಂಭಿಸಿದವರು ಯಾರು ಬಲ್ಲಿರಾ?'

'ಪರಿಷತ್ತಿನ ಹಿರಿಯರು.'

'ಆ ವಾದ ಎಲ್ಲಿಗೆ ಕೊನೆ ಮುಟ್ಟಿತು ಬಲ್ಲಿರಾ?'

'ನೀವು ಹೊರಗೆ ಬಂದಿರಿ.'

'ಅವರು?'

'ಅವರು ಹಿಂದಿಯೊಡನೆ ಒಪ್ಪಂದ ಮಾಡಿಕೊಂಡು ಅಖಿಲ-ಭಾರತ ವ್ಯಕ್ತಿಗಳಾದರು.'

'ಇದರಿಂದ ಕನ್ನಡದ ಗತಿಯೇನಾಯಿತು?'

'ಹಾಳಾಯಿತು.'

'ಆದರೆ ಹಿರಿಯರೂ ಶಕ್ತಿ ಮೀರಿ ಕನ್ನಡಕ್ಕಾಗಿ ದುಡಿಯುತ್ತಿದ್ದಾರಲ್ಲಾ.'

'ನಾನು ಇಲ್ಲವೆನ್ನಲಿಲ್ಲ. ಆದರೆ ಆ ದುಡಿಮೆಯ ರೀತಿ ನನಗೆ ಒಪ್ಪಿಗೆಯಿಲ್ಲ. ವಿವಿಧ ವಿಚಾರಗಳುಳ್ಳ ಹತ್ತು ಜನರನ್ನು ಕೂಡಿಕೊಂಡು ಕೆಲಸ ಮಾಡಲಾಗದವರು ಒಡೆದು ಹಂಚಿ ಹೋದ ಕನ್ನಡ ನಾಡನ್ನು ಕಟ್ಟಬಲ್ಲರೇ?'

'ಈಗವರು ಹತ್ತಾರು ಜನಗಳನ್ನು ಕೂಡಿಸಿಕೊಂಡಿಲ್ಲವೇ?'

'ಕೂಡಿಸಿಕೊಂಡಿದ್ದಾರೆ. ತಮ್ಮ ಮತಕ್ಕೆ ವಿರೋಧವನ್ನು ಸೂಚಿಸದಂತಹವರನ್ನೇ! ತಮ್ಮ ಮಠವನ್ನೇ ಸ್ಥಾಪಿಸಿಕೊಂಡಿದ್ದಾರೆ. ಹೋದ ಹೋದ ಕಡೆ ಅದರ ಶಾಖೆಗಳನ್ನು ಬೆಳೆಸುತ್ತಾರೆ. ಕನ್ನಡದ ಕೆಲಸ ಹೇಗೇ ಇರಲಿ, ಪರಸ್ಪರ ಪ್ರಶಂಸೆಯ ಕೆಲಸ ನಿಷ್ಕಂಟಕವಾಗಿ ಸಾಗುತ್ತಿದೆ.'

'ಈ ಪರಿಸ್ಥಿತಿ ಸುಧಾರಿಸುವುದು ಹೇಗೆ?'

'ಹಿರಿಯರಿಗೆ ವಿಶಾಲ ಅಂತಃಕರಣ ಬೆಳೆದಾಗ.'

'ಅದು ಸಾಧ್ಯವೇ?'

'ಸಾಧ್ಯವನ್ನಾಗಿಸಬೇಕು. ಜನವಾಣಿಗೆ ಸಾಕಷ್ಟು ಕೆಚ್ಚು ಬಂದು, ಈ ಆಲಸ್ಯ ಪ್ರವೃತ್ತಿ ಹೋಗಬೇಕು.'

'ಅದು ಎಂದಿಗೆ ಸಾಧ್ಯ.'

'ದೇಶ ಸಂಪೂರ್ಣ ಸ್ವತಂತ್ರವಾದಾಗ.'

'ರಾಜಕೀಯವಾಯಿತು—ಅದಕ್ಕೂ ಸಾಹಿತ್ಯಕ್ಕೂ ಏನು ಸಂಬಂಧ?'

'ರಾಜಕೀಯದ ಗುರಿಯೂ ಜನಹಿತ, ಸಾಹಿತ್ಯದ ಆದರ್ಶವೂ ಅದೇ ಆಗಿದೆ. ನಮ್ಮ ಕನ್ನಡ ಸಾಹಿತ್ಯ ಸಂಸ್ಥೆ ಎಲ್ಲ ವಿಚಾರವಾದಿಗಳಿಗೂ ಸ್ವಾಗತ ನೀಡಬೇಕು. ಹಿರಿಯರು ತಮ್ಮ ಮೇರು ಸಿಂಹಾಸನದಿಂದ ಕೆಳಗಿಳಿದು ಜೀವನದ ಸಮಸ್ಯೆಗಳನ್ನು ಗಮನಿಸಬೇಕು.'

'ಈಗವರು ಜೀವನದ ಸಮಸ್ಯೆಗಳನ್ನು ಗಮನಿಸುತ್ತಿಲ್ಲವೆಂದು ನಿಮ್ಮ ಅಭಿಪ್ರಾಯವೇ'?

'ನಿಸ್ಸಂದೇಹವಾಗಿ. ಅವರ ಉಪನ್ಯಾಸಗಳನ್ನು ಕೇಳಿ ನೋಡಿ ಗ್ರಂಥಗಳನ್ನು ಓದಿ ನೋಡಿ. ಪಂಪ ರನ್ನರ ಕ್ಷಾತ್ರ ಯುಗ, ಸೀತಾ ಸಾವಿತ್ರಿ ದಮಯಂತಿಯರ ಆದರ್ಶ ಸ್ತ್ರೀ ಸಮಾಜ, ವಾಲ್ಮೀಕಿ, ಷೇಕ್ಸ್ ಪಿಯರ್ ಮಹಾ ಕವಿಗಳ ಜೀವನ ಸಂಕಲ್ಪಗಳಲ್ಲಿಯೇ ಅವರ ಚಿತ್ತವಿನ್ನೂ ನಲಿಯುತ್ತಿದೆ.'

'ಬೇಕಾದಷ್ಟು ಪ್ರವಾಸ ಮಾಡಿ ಜನ ಸಾಮಾನ್ಯದ ಸಂಬಂಧವನ್ನಿಟ್ಟುಕೊಳ್ಳುತ್ತಾರಲ್ಲಾ.'

'ಪ್ರವಾಸ ಮಾಡುತ್ತಾರೆ. ಹೇಗೆ ಬಲ್ಲಿರಾ? ರಾಮಮೋಹನ ಕಂಪನಿ ಯವರ ೪೦ ದಿವಸಗಳ ಟಿಕೇಟು ಕೊಂಡು ಭಾರತಪರ್ಯಟನ ಮಾಡಿ ಬಂದ ಹಾಗೆ. ಸೆಕೆಂಡ್ ಕ್ಲಾಸು ಪ್ರಯಾಣ; ದಿವಸಕ್ಕೆ ಒಂದೊಂದು ಊರು; ಹೋದ ಕಡೆ ಶ್ರೀಮಂತರ ಮನೆಯಲ್ಲಿ ಉಳಿದುಕೊಳ್ಳುವುದು. ಅವರು ಕಾಣುವುದು ಉಪನ್ಯಾಸ ಮಂದಿರ, ಕರ್ನಾಟಕ ಸಂಘದ ಪುಸ್ತಕ ಭಂಡಾರ ಮತ್ತು ರೈಲ್ವೇ ಸ್ಟೇಷನ್. ಇದರಿಂದ ಜನ ಸಾಮಾನ್ಯದ ಸಂಬಂಧ ಕಷ್ಟ ಸುಖಗಳ ಪರಿಚಯ ಎಷ್ಟಾಗುತ್ತದೆಂಬುದನ್ನು ನೀವೇ ಪರ್ಯಾಲೋಚಿಸಿ.'

'ಹಿರಿಯರಿಗೆ ನೀವು ಹೇಳುವುದೇನು?'

'ಸೆಕೆಂಡ' ಕ್ಲಾಸ್ ಬಿಟ್ಟು ಮೂರನೆಯ ಕ್ಲಾಸಿನಲ್ಲಿ ಪ್ರಯಾಣ ಮಾಡಿ; ತಲೆಯ ಮೇಲಿರುವ ಜರಿತಾರಿಯ ರುಮಾಲು ತೆಗೆದು ಖಾದಿ ಟೋಪಿ ಹಾಕಿ; ಹೋದ ಕಡೆ ಶ್ರೀಮಂತರ ಆತಿಥ್ಯ ಸ್ವೀಕರಿಸುವುದನ್ನು ಬಿಟ್ಟು ಸಾಧಾರಣ ಮನುಷ್ಯನಮನೆಯಲ್ಲಿ ಉಳಿದುಕೊಳ್ಳಿ; ಹಕ್ಕಿಯಂತೆ ಒಂದೂರಿನಿಂದ ಇನ್ನೊಂದೂರಿಗೆ ಹೋಗುವುದನ್ನು ನಿಲ್ಲಿಸಿ ಒಂದೇ ಊರಿನಲ್ಲಿ ನಿಂತು ಎಲ್ಲರ ಪರಿಚಯ ಮಾಡಿಕೊಳ್ಳಿ; ನಿಮ್ಮ ಗಂಟು ಮೂಟೆ ನೀವೇ ಹೊರುವುದನ್ನು ಅಭ್ಯಾಸ ಮಾಡಿಕೊಳ್ಳಿ; ಮೋಟಾರು ಕಾರು ಬಿಟ್ಟು ಕಾಸಿಂ ಸಾಬಿಯ ಜಟಕಾದಲ್ಲಿ ತಿರುಗಾಡಿ — ಅವನ ಜತೆ ಧಾರಾಳವಾಗಿ ಮಾತನಾಡಿ ಅವನ ಕುಲ್ಫಿ, ಘೋಡಾ ಕಥೆಯನ್ನು ಸ್ವಲ್ಪ ಕೇಳಿಕೊಳ್ಳಿ; ನಿಮ್ಮ ಮಡಿ ಹುಡಿಯನ್ನೆಲ್ಲಾ ಮನೆಯಲ್ಲಿಯೇ ಬಿಟ್ಟು ಎಲ್ಲಾ ಜಾತಿ ಮತ ಪಂಥದವರಲ್ಲಿಯೂ ಸರಿಸಮನಾಗಿ ವ್ಯವಹರಿಸಿ.'

'ಸಾಹಿತ್ಯ ಬೀದಿಗೆ ಬರಬೇಕೇ?'

'ಸೂರ್ಯ ಬೀದಿಗೆ ಬಂದಿಲ್ಲವೇ. ಅರಮನೆಯ ಚಿನ್ನದ ಕಳಶದ ಮೇಲೇ ಏನು ಅವನು ಪ್ರಕಾಶಿಸುವುದು?'

'ನಿಮಗೆ ಎಂತಹ ಸಾಹಿತ್ಯ ಬೇಕು?'

'ನನಗೆ ಎಂದರೆ ನಮ್ಮ ಜನಕ್ಕೆ ಎಂದಲ್ಲವೇ ನಿಮ್ಮ ಅಭಿಪ್ರಾಯ.'

'ಹೌದು.'

'ಸಜೀವ ಸಾಹಿತ್ಯ, ಸಾರ್ಥಕ ಸಾಹಿತ್ಯ, ಭಾವಪ್ರಚೋದಕ ಸಾಹಿತ್ಯ.

ಅದರ ಸೃಷ್ಟಿಗೆ ತ್ಯಾಗ ಬೇಕು, ಧೀಃಶಕ್ತಿ ಬೇಕು, ವಿಚಾರಶಕ್ತಿ ಕೂರಲಗಿನಂತೆ ಝುಳಪಿಸಬೇಕು.'

'ಸಂಭಾಷಣೆ ಬಹಳ ಗಂಭೀರವಾಗುತ್ತ ಬಂತು. ನಿಮ್ಮ ವಿಷಯ ಒಂದೆರಡು ಮಾತು ಕೇಳಲೇ?'

'ಅವಶ್ಯವಾಗಿ ಕೇಳಿ.'

'ನಿಮ್ಮ ಧರ್ಮ ಯಾವುದು?'

'ಅಂತ್ಯಜ ಧರ್ಮ.'

'ಪರಿಹಾಸ್ಯ ಮಾಡುತ್ತಿದ್ದೀರಿ. ಸರಿಯಾಗಿ ಹೇಳಿ.'

'ನಿಜಕ್ಕೂ ನಾನು ಹೊಲೆಯ ಮತ್ತು ಹಿಂದೂಸ್ಥಾನದ ೩೫ ಕೋಟಿ ಜನರೂ ಹೊಲೆಯರೇ.'

'ಹಾಗೆಂದರೆ?'

'ಎಂದು ಪರಕೀಯರಿಗೆ ನಮ್ಮ ದೇಶವನ್ನು ಪಸಾಯಸ ದಾನ ಮಾಡಿದೆವೋ ಅಂದೇ ನಮ್ಮ ಧರ್ಮ-ಸಂಸ್ಕೃತಿ ಎಲ್ಲಾ ನಾಮಾವಶೇಷವಾದವು.'

'ಹಾಗಾದರೆ ಬ್ರಾಹ್ಮಣ-ಬ್ರಾಹ್ಮಣೇತರ; ಹಿಂದೂ-ಮುಸ್ಲಿಂ ಈ ಹೋರಾಟಗಳೇತಕ್ಕೆ?'

'ಅಜ್ಞಾನದಿಂದ. ಹಿಂದೂಸ್ಥಾನದ ಸರ್ವಾಧಿಕಾರಿ ನಾನೆಂದಾದರೂ ಆದರೆ ಈ ಧರ್ಮ, ಮತಗಳನ್ನು ಒಂದೇ ಹೊಡೆತದಲ್ಲಿ ತೊಡೆದು ಹಾಕುತ್ತೇನೆ. ಇದು ಹೋಗದ ಹೊರತು ನಮ್ಮ ದೇಶಕ್ಕೆ ಮುಕ್ತಿಯಿಲ್ಲ.'

'ಎಂದಿಗಾದರೂ ಅದು ಸಾಧ್ಯವೇ?'

'ಸಾಧ್ಯ. ರಷ್ಯಾ ದೇಶಕ್ಕೆ ಸಾಧ್ಯವಾದದ್ದು ಹಿಂದೂಸ್ಥಾನಕ್ಕೆ ಸಾಧ್ಯವಿಲ್ಲವೇಕೆ? ನಮ್ಮ ಎಲ್ಲಾ ಅಧಿವ್ಯಾಧಿಗಳಿಗೂ ಒಂದೇ ಚಿಕಿತ್ಸೆ — ದೇಶಕ್ಕೆ ಸಂಪೂರ್ಣ ಸ್ವಾತಂತ್ರ್ಯ ಬರಬೇಕು.

'ಈ ಭಾವನೆಯನ್ನು ನಿಮ್ಮ ಗ್ರಂಥಗಳಲ್ಲಿ ತಂದಿದ್ದೀರಾ?'

'ಸಾಕಷ್ಟು ತಂದಿದ್ದೇನೆ. ನನ್ನ 'ಸಾಹಿತ್ಯರತ್ನ' ಕಾದಂಬರಿ ಇದೇ ಅಭಿಪ್ರಾಯದ ವ್ಯಾಖ್ಯೆಯಾಗಿದೆ.'

'ನಿಮ್ಮ ಕಾದಂಬರಿಗಳು ನನಗೆ ಬಹಳ ಮೆಚ್ಚು. ಕರ್ನಾಟಕದ ಸರ್ವೋತ್ಕೃಷ್ಟ ಕಾದಂಬರಿಕಾರರು ನಿಮ್ಮ ಅಭಿಪ್ರಾಯದಲ್ಲಿ ಯಾರು?'

'ಯಾರೇನು? ನಾನೇ.'

'ಮಿಕ್ಕವರು ಏತಕ್ಕೆ ಹಾಗೆ ಹೇಳುವುದಿಲ್ಲ?'

'ಅವರನ್ನು ಕೇಳಿ ನೋಡಿ.'

'ನಿಮಗೆ ಗದ್ಯದ ಮೇಲೆ ತುಂಬ ಇಷ್ಟವೆಂದು ಕಾಣುತ್ತದೆ.'

'ಹೌದು.'

'ಪದ್ಯವನ್ನೇಕೆ ಬರೆಯುವುದಿಲ್ಲ?'

'ನಾನು ಯಾವದನ್ನೂ ಬರೆಯಬೇಕೆಂದು ಬರೆಯುವುದಿಲ್ಲ. ಹೇಳಬೇಕಾದ ವಿಷಯವಿದ್ದರೆ ಅದು ತಾನಾಗಿಯೇ ಹೊರಬರುತ್ತದೆ.'

'ಕನ್ನಡ ನಾಡಿನಲ್ಲಿ ಇಷ್ಟು ಜನ ಕಾವ್ಯ ಬರೆಯುವಾಗ ನೀವು ಬರೆಯದಿರುವುದು ಆಶ್ಚರ್ಯ.'

'ಅದಕ್ಕೇ ನಾನು ಬರೆಯುತ್ತಿಲ್ಲ. ಕಾವ್ಯ ಬರೆಯುವುದು ಸುಲಭ. ಅದಕ್ಕೇ ಎಲ್ಲರೂ ಪದ್ಯ ಬರೆಯಲು ಹೊರಡುತ್ತಾರೆ.'

'ಗದ್ಯಕ್ಕಿಂತ ಪದ್ಯ ಬರೆಯುವುದು ಸುಲಭವೇ?'

'ಗದ್ಯ ಕೆಟ್ಟರೆ ಪದ್ಯವಾಗುತ್ತದೆಂಬ ಮಾತು ನೀವು ಕೇಳಿಲ್ಲವೇ?'

'ಕರ್ನಾಟಕದಲ್ಲಿ ವ್ಯಾಪಿಸಿರುವ ಪದ್ಯರಚನಾಬಾಹುಳ್ಯಕ್ಕೆ ಕಾರಣವೇನಿರಬಹುದು?'

'ವಿಚಾರದ ಅಭಾವ. ಕರ್ಮಕೌಶಲ್ಯದ ಕೊರತೆ. ಪ್ರಸಿದ್ಧಿಯ ತೀಕ್ಷ್ಣದಾಹ.'

'ಎಲ್ಲಾ ಸೂತ್ರಗಳಿದ್ದ ಹಾಗಿವೆ. ಸ್ವಲ್ಪ ವಿಶದ ಪಡಿಸುವಿರಾ?'

'ಪದ್ಯ ಬರೆಯುವುದಕ್ಕೆ ವಿಚಾರದ ಕುಣಿಕೆ ಬೇಕಿಲ್ಲ. ಹಕ್ಕಿ ಬೇಕಾದಲ್ಲಿ ಬೇಕಾದ ಹಾಗೆ ಹಾರಬಹುದು. ಆಧುನಿಕ ಕವಿತೆಗೆ ಛಂದಸ್ಸಿನ ಕಟ್ಟು ಇಲ್ಲದಿರುವುದರಿಂದ ಅದು ಸ್ವಚ್ಛಂದಗಾಮಿ. ಆಡುತ್ತ ಆಡುತ್ತ ಹತ್ತು ಪಂಕ್ತಿ ಪದ್ಯ ಜೋಡಿಸಬಹುದು. ಆದರೆ ವಿಚಾರಬದ್ಧವಾಗಿ ಸುವಾಚ್ಯವಾಗಿ, ಸುಸಂಘಟಿತವಾಗಿ ಗದ್ಯ ಬರೆಯುವುದು ಕಷ್ಟ. ಗದ್ಯ

ಲೇಖಕ ಎನಿಸಿಕೊಳ್ಳುವುದಕ್ಕಿಂತಲೂ 'ಕವಿ' ಎನಿಸಿಕೊಳ್ಳುವುದು ಹೆಚ್ಚು ಗಂಭೀರವಾಗಿ ಕಾಣುವುದು.'

'ಇದನ್ನು ಎಲ್ಲರಿಗೂ ಅನ್ವಯಿಸುತ್ತೀರಾ?'

'ಉಂಟೇ? ಬೇಂದ್ರೆ, ಪುಟ್ಟಪ್ಪ, ರತ್ನರಂತಹ ಉತ್ತಮ ಕವಿಗಳೂ ಇದ್ದಾರೆ.'

'ಈಚೆಗೆ ಬರುತ್ತಿರುವ ಕಾವ್ಯಗಳೆಲ್ಲಾ ನೀವು ಹೇಳಿದಂತೆಯೇ ಇವೆ.'

'ಕಾವ್ಯವೇತಕ್ಕೆ? ಕಥೆಯ ಹಣೆಯ ಬರಹವೂ ಅದೇ ಆಗಿದೆ. ನಾಟಕ ವಂತೂ ನಾಮಾವಶೇಷವಾಯಿತು. ಇಂದು ಸಾಹಿತ್ಯದ ಬರಗಾಲ ಕರ್ನಾಟಕದಲ್ಲಿ.'

'ಕಾರಣವೇನಿರಬಹುದು?'

'ಕೆಲವು ಹಿರಿಯರು ಹಿಡಿದ ತಪ್ಪು ದಾರಿ.'

'ಮತ್ತೇಕೆ ಹಿರಿಯರ ಮೇಲೆ ಆಕ್ಷೇಪಣೆ ಹೊರಿಸುತ್ತೀರಿ.'

'ಕೇಳಿ, ಹಿರಿಯರು ಕವಿಗಳು. ಅವರ ಆಸೆ ಅವರಂತೆ. ಅವರನ್ನನು ಸರಿಸಿ ಅನೇಕರು ಪದ್ಯಗಳನ್ನು ಬರೆಯಲೆಂದು ಕಿರಿಯರಿಗೆ ಪ್ರೋತ್ಸಾಹ ಸಿಕ್ಕುತ್ತಿತ್ತು. ಬರೆದರು ಕೃಪಾ ಹಸ್ತವನ್ನ ನೀಡಿದ ಮಹಾ ಕವಿಯ ಮೇಲೆ ಒಂದು ಕಾವ್ಯ. ಹಿರಿಯರ ಹಿಗ್ಗಿಗೆ ಮಿತಿಯುಂಟೇ? ಆದರೆ ಕಿರಿಯ ಕವಿ ಗಳು ಹುಟ್ಟಿದಲ್ಲಿಯೇ ಅಳಿದರು. ಸ್ವತಂತ್ರ ದಾರಿಗಳನ್ನು ಹುಡುಕಿಕೊಂಡ ಕೆಲವರು ಉಳಿದರು.'

'ಹಾಗಾದರೆ ಕಿರಿಯರು ಹೆಚ್ಚಾಗಿ ಗದ್ಯದ ಕಡೆಗೆ ಲಕ್ಷ್ಯ ಕೊಡ ಬೇಕೆನ್ನುತ್ತೀರೇನು?'

'ಮೊದಲು ಜೀವನ ಅನುಭವಗಳ ಕಡೆಗೆ ಲಕ್ಷ್ಯ ಕೊಡಬೇಕು. ಜನಕ್ಕೆ ಹೇಳುವುದು ತನ್ನಲ್ಲಿ ಏನಿದೆ? ತಾನು ಹೇಳುವುದು ತನ್ನದೇ ಪರ ರದೇ ಎನ್ನುವುದನ್ನು ವಿಚಾರ ಮಾಡಿಕೊಳ್ಳಬೇಕು. ಹೇಳಬೇಕಾದುದನ್ನು ನೇರವಾಗಿ, ತೀಕ್ಷ್ಣವಾಗಿ ಎಲ್ಲರಿಗೂ ಅರ್ಥವಾಗುವ ಹಾಗೆ ಹೇಳಬೇಕು. ಕನ್ನಡದಲ್ಲಿ ಹಿಂದೆ ಬರೆದ ಅನೇಕ ಮಹಾ ಕವಿಗಳು ತಮ್ಮ ಕೃತಿಗಳನ್ನೆಲ್ಲಾ ಕಾವ್ಯರೂಪದಲ್ಲಿಯೇ ಬರೆದಿದ್ದಾರೆ. ಕನ್ನಡ ಸಂಸ್ಕೃತಿಯ ಸರ್ವತೋನ್ಮುಖ

ಪರಿಚಯ ಬಯಸುವವರು ಅವುಗಳ ಅಭ್ಯಾಸವನ್ನಂತೂ ಮಾಡಲೇ ಬೇಕು. ಪದ್ಯ ಓದುವ ಅಭಿಲಾಷೆಯುಳ್ಳವರು ಕಾವ್ಯಗಳನ್ನು ಓದುತ್ತಾರೆ, ಇಂದಿನ ಶ್ರೇಷ್ಠ ಕವಿಗಳ ಕೃತಿಗಳನ್ನು ಓದುತ್ತಾರೆ. ಮಾಸಪತ್ರಿಕೆಯ ಕವಿಗಳನ್ನು ಓದುವ ಹವ್ಯಾಸಕ್ಕೆ ವೃಥಾ ಏತಕ್ಕೆ ಬೀಳುತ್ತಾರೆ ಹೇಳಿ.'

'ನಿಮಗೆ ಯಾರ ಗದ್ಯಶೈಲಿ ಮೆಚ್ಚು.'

'ಕನ್ನಡದಲ್ಲಿ ಸುಂದರವಾಗಿ ಗದ್ಯವನ್ನು ಬರೆಯುವ ಹಲವು ಉತ್ತಮ ಬರೆಹಗಾರರಿದ್ದಾರೆ. ಅವರೆಲ್ಲರನ್ನೂ ಇಲ್ಲಿ ನಿರ್ದೇಶಿಸಲಾರೆ. ಕೆಲವರ ಶೈಲಿಯನ್ನು ವಿಚಾರ ಮಾಡೋಣ. ಗುಂಡಪ್ಪನವರ ಮತ್ತು ಆಲೂರ ವೆಂಕಟರಾಯರ ಕ್ಷಾತ್ರ ಗದ್ಯ. ಇವರಿಬ್ಬರ ಶೈಲಿ ಪರ್ವತಧಾರೆಯಂತೆ. ಅದು ಬರುವ ರಭಸಕ್ಕೆ ಹೃದಯ ಝಲ್ಲೆನ್ನುತ್ತದೆ. ಏನದು ರುದ್ರ ಸೌಂದರ್ಯ-ಏನದು ಘನ ಗಾಂಭೀರ್ಯ!! ಮಾಸ್ತಿ, ಎಸ್. ವಿ. ರಂಗಣ್ಣ ಇವರ ಶೈಲಿಯನ್ನು ಕಾಂತಾಸಮ್ಮಿತಿಗೆ ಹೋಲಿಸಬಹುದು. ಮಲ್ಲಿಗೆ ಯಂತಹ ಕೋಮಲತೆ, ತಿಳಿಯಾದ ನಗೆ, ಮಾರ್ಮಿಕವಾದ ಮಾತುಗಾರಿಕೆ, ಇವರ ಶೈಲಿಗಳಲ್ಲಿ ಎತ್ತಿ ಕಾಣುತ್ತವೆ. ಜಾಗಿರದಾರರ ಗದ್ಯ ಒಂದು ಬೇರೆ ಮಾದರಿಯದು. ಅವರ ಶೈಲಿಯಲ್ಲಿ ವಿಚಾರವಿದೆ, ಕಟು ಹಾಸ್ಯವಿದೆ. ಕಾರಂತರ ಶೈಲಿಯನ್ನು ವಜ್ರದ ಅದರಿಗೆ ಹೋಲಿಸಬಹುದು. ವಜ್ರದ ಹರಳು ಕಾಣುವುದಕ್ಕೆ ಬಹಳ ಕಗ್ಗಲ್ಲು ಕೊರೆಯಬೇಕು. ಆದರೂ ಶ್ರಮ ಕೆಲವು ಸಲ ನಿಸ್ಸಾರ್ಥಕವಾಗುವುದಿಲ್ಲ. ಪಂಡಿತರಾದರೂ ಕನ್ನಡ ಶೈಲಿಯ ತಿರುಳನ್ನು ಬಲ್ಲವರೆಂದರೆ ಮಹಾದೇವ ಪ್ರಭಾಕರ ಪೂಜಾರರವರು. ರಸಿಕತೆ, ಪಾಂಡಿತ್ಯಗಳೆರಡೂ ಅವರ ಶೈಲಿಯಲ್ಲಿ ಕಂಡುಬರುತ್ತವೆ. ಸಿದ್ದವ್ವನಹಳ್ಳಿ ಕೃಷ್ಣಶರ್ಮರ ಶೈಲಿ ನನಗೆ ಮೆಚ್ಚು. ಅವರ 'ಗಾಂಧೀ ಸಾಹಿತ್ಯ' ವಿಷಯ ನನಗೆ ರುಚಿಸದಿದ್ದರೂ ಶೈಲಿಯ ಸೊಬಗಿಗಾಗಿ ಓದುತ್ತೇನೆ. ಅನಾಯಾಸವಾಗಿಯೂ, ಲಲಿತ ಮನೋಹರವಾಗಿಯೂ ಬರೆಯಬಲ್ಲವರೆಂದರೆ ದೇವುಡು ಅವರು.'

'ಶೈಲಿಯನ್ನು ದೊರಕಿಸಿಕೊಳ್ಳುವುದು ಹೇಗೆ? ನೀವು ಹೇಗೆ ದೊರಕಿಸಿಕೊಂಡಿರಿ.'

‘ಪಾಂಡಿತ್ಯ, ಪ್ರವಚನಗಳಿಂದ ಶೈಲಿ ಬರುವುದಿಲ್ಲ. ಉತ್ತಮ ಶೈಲಿ ಇರುವವರ ಕೃತಿಗಳನ್ನು ನೋಡಿ ಅನುಕರಿಸುತ್ತ ಬಂದರೂ ಶೈಲಿ ಬರುವುದಿಲ್ಲ. ಅದು ಸ್ವಯಂಸ್ಫೂರ್ತಿಯಿಂದ ಚಿಮ್ಮುವ ಚಿಲುಮೆ. ವಿಷಯ ಮತ್ತು ಅದಕ್ಕನುಗುಣವಾದ ಶ್ರದ್ಧೆಯಿದ್ದರೆ ಶೈಲಿ ತಾನೇ ತಾನಾಗಿ ರೂಪುಗೊಳ್ಳುತ್ತದೆ. ‘Style is the man’ ಎನ್ನುವ ಮಾತಿನಲ್ಲಿ ಬಹಳ ಅರ್ಥವಿದೆ. ದೃಷ್ಟಾಂತಕ್ಕೆ ತೆಗೆದುಕೊಳ್ಳಿ. ಬಡತನದ ಮೇಲೆ ಎಲ್ಲರೂ ಬರೆಯುತ್ತಾರೆ. ಉಂಡುಟ್ಟು ಸುಖವಾಗಿರುವವರೂ ಬರೆಯುತ್ತಾರೆ. ಅನುಭವಿಯ ಮಾತಿನಲ್ಲಿ ಒಂದು ಕೆಚ್ಚು, ಕರುಣೆ ತುಂಬಿರುತ್ತದೆ. ಓದಿದ ಕೂಡಲೆ ನಮ್ಮ ಹೃದಯದ ಮೇಲೆ ಒಂದು ವಿಶೇಷ ಪರಿಣಾಮವುಂಟಾಗುತ್ತದೆ. ಸುಖದ ಸುಪ್ಪತ್ತಿಗೆಯ ಮೇಲಿರುವವನು ‘ಕವಿ ಸಮಯಕ್ಕೆ’ ಬದ್ಧನಾಗಿ ತಾನೂ ಬಡತನವನ್ನು ವರ್ಣಿಸುತ್ತಾನೆ. ಅವನ ಮಾತುಗಳಲ್ಲಿ ನಮಗೆ ಕಾಣಬರುವುದು ಬರೀ ಬುಡುಬುಡುಕೆಯ ನಿನಾದ. ಲೇಖಕ ಸತ್ಯಪ್ರಿಯನೂ ಶಕ್ತಿ ಉಪಾಸಕನೂ ಆಗಿದ್ದಲ್ಲಿ ಅವನ ಶೈಲಿಯಲ್ಲಿ ತೇಜಸ್ಸು ಕೂಡಿರುತ್ತದೆ. ಗಾಂಧೀಜಿಯವರ ಲೇಖನಗಳನ್ನು ತೆಗೆದುಕೊಳ್ಳಿ. ಅವರೇನೂ ವಿದ್ವಾಂಸರಲ್ಲ. ಆದರೆ ಅವರ ಒಂದೊಂದು ಮಾತೂ ಮುತ್ತು ಸಿಂಪಡಿಸಿದಂತಿರುತ್ತದೆ. ಲೇಖಕ ಅಂತರ್ಮುಖಿಯಾದಷ್ಟೂ ಅವನ ಶೈಲಿಯಲ್ಲಿ ಜೀವಕಳೆ ಮೂಡುತ್ತದೆ.’

‘ಅನುಭವವಿಲ್ಲದಿದ್ದ ಮೇಲೆ ಸಾಹಿತ್ಯಸೃಷ್ಟಿಗೆ ಕೈಹಾಕಬಾರದೆಂದು ನಿಮ್ಮ ಅಭಿಮತವೋ?’

‘ಖಂಡಿತವಾಗಿ. ಅನುಭವ ಎರಡು ವಿಧ. ಒಂದು ಮಾನಸಿಕ, ಒಂದು ದೈಹಿಕ. ಉತ್ತಮಲೇಖಕ ಎರಡನ್ನೂ ಸಾಧಿಸಲು ಸದಾ ಯತ್ನಿಸುತ್ತಿರುತ್ತಾನೆ. ಎಲ್ಲಾ ಅನುಭವವೂ ಎಲ್ಲರಿಗೂ ಇರುವುದು ಶಕ್ಯವಿಲ್ಲ. ಇಲ್ಲದ ಅನುಭವವನ್ನು ದೊರಕಿಸಿಕೊಳ್ಳಲೆತ್ನಿಸಬೇಕು. ಅನುಭವಹೀನವಾದ ಬರವಣಿಗೆ ಪ್ರಾಣವಿಲ್ಲದ ದೇಹದಂತೆ.’

‘ಈ ಅನುಭವ ನೀತಿಯ ಎಲ್ಲೆಯನ್ನು ವಿಧರಿಸಿದ್ದೀರೋ?’

‘ರೂಢ ನೀತಿಗೆ ಸೊಪ್ಪು ಹಾಕುವವನು ಯಾವನಾದರೂ ಜೀವ

ಸ್ಥಾನದ ಅರ್ಚಕ ವೃತ್ತಿಯನ್ನು ಅವಲಂಬಿಸಲಿ. ಅವನ ವೃತ್ತಿ, ಪ್ರವೃತ್ತಿಗಳಿಗೆ ಸಂಬಂಧವಿಲ್ಲ. ಬರೆಹಗಾರ ತೆರೆದ ಕಣ್ಣಿನ ಪುರಂದರ-ತೆರೆದ ಹೃದಯದ ಹೃಷೀಕೇಶ, ಅವನ ಅನುಭವ, ಅನುಕಂಪ ಏಳು ಸಮುದ್ರಗಳ ಆಚೆಗೂ ಚಾಚುತ್ತದೆ. ಈ ಸಾಧನೆಯಲ್ಲಿ ಅವನು ತನ್ನನ್ನು ಅರ್ಪಿಸಿಕೊಳ್ಳುವ ಹುತಾತ್ಮ. ವ್ಯಕ್ತಿಗೆ ಘಾತವಾಗಬಹುದು; ಸಮಾಜದ ಕಣ್ಣಿಗೆ ಅವನು ಅನೀತಿಯ ಪಶುವಾಗಿ ಕಾಣಬಹುದು. ಸಮಾಜದ ಸುಳ್ಳು ದೇವರನ್ನೇ ಪೂಜಿಸುತ್ತ ಕುಳಿತಿದ್ದರೆ ಜನ್ನ, ರತ್ನಾಕರ, ಮೋಪಸಾ, ಜೋಲಾ, ಫ್ಲಾಬೋ ಇವರು ಎಲ್ಲಿರುತ್ತಿದ್ದರು.'

'ನೀವು ಹೇಳುವ ಮಾನದಂಡದಿಂದ ಅಳೆದರೆ ಕರ್ನಾಟಕದಲ್ಲಿ ಎಷ್ಟು ಮಂದಿ ಬರೆಹಗಾರರು ಸಿಕ್ಕುತ್ತಾರೆ?'

'ಬಹಳ ಸ್ವಲ್ಪ ಮಂದಿ. ಆದರೆ ಆ ಸ್ವಲ್ಪ ಮಂದಿಯ ಮೇಲೆ ಕಣ್ಣಡಿ ನಾಳಿನ ಸಾಹಿತ್ಯಕ್ಕೆ ಅವರೇ ಅಡಿಗಲ್ಲು.'

ಹೊತ್ತು ಬಹಳ ಆಗುತ್ತ ಬಂದಿತ್ತು. ರಾಯರಿಗೆ ಊಟಕ್ಕೆ ಹೊತ್ತಾಗುತ್ತದೇನೋ ಎಂಬ ಚಿಂತೆ ಹುಟ್ಟಿತು.

'ಅಪ್ಪಣೆಯಾದರೆ ಬರುತ್ತೇನೆ. ಮನಸ್ಸು ಬಿಚ್ಚಿ ಇಷ್ಟು ವಿಷಯಗಳನ್ನು ತಿಳಿಹೇಳಿದ್ದಕ್ಕೆ ತುಂಬ ಖುಣಿಯಾಗಿದ್ದೇನೆ.'

'ನೀವು ಬಂದದ್ದು ನನಗೂ ಸಂತೋಷ. ನಾವು ಆಗಾಗ್ಗೆ ಸಹೃದಯರೊಂದಿಗೆ ಹೃದಯವನ್ನು ತೋಡಿಕೊಳ್ಳಬೇಕು.'

'ಆಗಾಗ್ಗೆ ಬಂದು ಕಾಣುವುದಕ್ಕೆ ಅಪ್ಪಣೆಯಾಗಬೇಕು.'

'ಆಗಲಿ.'

'ಬೀಳ್ಕೊಂಡು ಹೊರಟೆ. ರಾಯರ ರೂಮಿನಿಂದ ಬರುತ್ತಿದ್ದ ಹೊಗೆ ನನಗೆ ಯಜ್ಞಕುಂಡದ ಧೂಮದ ಹಾಗೆ ಮನವರಿಕೆಯಾಯಿತು. ನಾನು ಕಾಣಲು ಬಂದದ್ದು ಒಬ್ಬ ಪಂಡಿತನನ್ನು; ಕಂಡದ್ದು ಒಬ್ಬ ಹುತಾತ್ಮನನ್ನು!!

---

## ಕಂಡದ್ದು ಎರಡನೆಯ ಸಲ

# ಹಿಂದೀ ಸಮಸ್ಯೆ

ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್ಸಿನವರು ಪ್ರಕಟಿಸಿರುವ ಡಾ|| ಸುನೀತಿ ಕುಮಾರ ಚಟರ್ಜಿಯವರ 'ಭಾಷೆಗಳು ಮತ್ತು ಭಾಷಾ ಸಮಸ್ಯೆ' ಹೊತ್ತಗೆಯನ್ನು ಓದಿದೆ. ವಾದಗ್ರಸ್ತವಾದ ಭಾಷಾ ಸಮಸ್ಯೆಯ ಮೇಲೆ ಶ್ರೀ ಕೃಷ್ಣರಾಯರು ಸಾಕಷ್ಟು ವಿಚಾರ ಮಾಡಿರುವುದು ನೆನಪಾಗಿ ಅವರೊಂದಿಗೆ ಇದನ್ನು ಚರ್ಚಿಸಬೇಕೆಂದು ನಿರ್ಧರಿಸಿದೆ. ಕಾಗದ, ಪತ್ರಗಳನ್ನು ಬರೆಯುವುದರಿಂದ ಸುಖವಿಲ್ಲವೆಂದು ನೇರವಾಗಿ ಅವರ ಮನೆಯ ಕಡೆ ಹೊರಟೆ. ವರಾಂಡದಲ್ಲಿ ಕುಳಿತದ್ದೂ ಆಯಿತು. ನಿಶ್ಶಬ್ದ—ಗಾಢ ಮೌನವಾವರಿಸಿತ್ತು. ಎರಡು ಗುಬ್ಬಚ್ಚಿಗಳು ಪ್ರೇಮಕಲಹವಾಡುತ್ತಿದ್ದವು. ಅದನ್ನು ನೋಡುತ್ತ ಕುಳಿತೆ. ಒಳಗಿನಿಂದ ಯಾರೂ ಬರಲಿಲ್ಲ.

'ರಾಯರೇ' ಎಂದು ಕೂಗಿದೆ.

ರಾಯರೇ ಬಂದು ವಿಶ್ವಾಸದಿಂದ ಒಳಗೆ ಕರೆದೊಯ್ದರು.

'ಸ್ವಲ್ಪ ಕೂಡಿ' ಎಂದು ನಾಲ್ಕು ಪಂಕ್ತಿ ಬರೆದು ಮುಗಿಸಿ ಲೇಖನಿಯನ್ನು ಕೆಳಗಿಟ್ಟು ನನ್ನ ಕಡೆ ತಿರುಗಿದರು.

'ಏನು ಬಂದದ್ದು ?'

'ತಮ್ಮನ್ನು ಕಾಣುವುದಕ್ಕೇ ಬಂದೆ........ಮತ್ತೆ ತಮ್ಮ ಬರವಣಿಗೆಗೆ ವಿಘ್ನ ತಂದ ಹಾಗಾಯಿತು.'

'ಅದೇನೂ ಹೆದರಬೇಡಿ. ವಿನಾಯಕ ನನ್ನ ಇಷ್ಟದೇವರು.'

'ಡಾ|| ಚಟರ್ಜಿಯವರ ಪುಸ್ತಕ ಓದಿದೆ. ತಾವೂ ಓದಿರಬಹುದು.'

'ರಾಯರು ಪಕ್ಕದಲ್ಲಿದ್ದ ತಿರುಗಣಿಯಿಂದ ಪುಸ್ತಕ ತೆಗೆದು ನನ್ನ ಕೈಗಿತ್ತರು. ಪುಸ್ತಕದ ತುಂಬ ಕೆಂಪು, ನೀಲಿ ಬಣ್ಣದ ಪೆನ್ಸಿಲ್ ಗುರುತುಗಳು."

'ಇದು ಹೇಗಿದೆ ?'

'ಚೆನ್ನಾಗಿದೆ. ಬರೆದವರು ದೊಡ್ಡ ವಿದ್ವಾಂಸರು.'

'ತಮಗೆ ಪುರಸತ್ತಿದ್ದರೆ ಭಾಷಾಸಮಸ್ಯೆಯನ್ನು ಚರ್ಚಿಸಬೇಕೆಂದು ಬಂದೆ.'

'ಆಗಬಹುದು.'

'ಹಿಂದೂಸ್ಥಾನಕ್ಕೆ ಏಕ ಭಾಷೆ—ಏಕ ಲಿಪಿ ಬೇಕೆಂಬುದರ ಬಗ್ಗೆ ತಮ್ಮ ಅಭಿಪ್ರಾಯವೇನು?'

'ನಾನು ಹಲವು ಸಲ ಆ ಬಗ್ಗೆ ಬರೆದಿದ್ದೇನೆ. ಆದರೆ ನನ್ನ ಹಿಂದಿನ ವಿಚಾರಗಳು ಕೆಲವು ಸ್ವಲ್ಪ ಮಾರ್ಪಾಟು ಹೊಂದಿವೆ.'

'ಏಕೆ?'

'ಅನುಭವ, ವ್ಯಾಸಂಗ ಮತ್ತು ಕಾಲಪರಿವರ್ತನೆಗಳಿಂದ.'

'ಹಾಗಾದರೆ ಈಗ ನೀವು ಏನು ಹೇಳುತ್ತೀರಿ?'

'ಸಾಕ್ರೆಟಿಸನ ಮಾರ್ಗವನ್ನವಲಂಬಿಸಿ ಕೆಲವು ಪ್ರಶ್ನೆಗಳನ್ನು ನಾನು ಕೇಳುತ್ತೇನೆ. ಸಮಂಜಸವಾಗಿ ಉತ್ತರ ಹೇಳಬೇಕು.'

'ಪ್ರಯತ್ನಿಸುತ್ತೇನೆ.'

'ಏಕ ಭಾಷೆ ಯಾರಿಗೆ ಬೇಕು.'

'ಒಂದು ರಾಷ್ಟ್ರಕ್ಕೆ.'

'ಹಿಂದುಸ್ಥಾನವು ಈಗ ಒಂದು ರಾಷ್ಟ್ರವಾಗಿದೆಯೋ?'

'ಸಾಂಸ್ಕೃತಿಕ ದೃಷ್ಟಿಯಿಂದ ಆಗಿದೆ, ರಾಜಕೀಯ ದೃಷ್ಟಿಯಿಂದ ಆಗಿಲ್ಲ.'

'ಸಾಂಸ್ಕೃತಿಕ ದೃಷ್ಟಿಯಿಂದ ಭಾಷಾಸಮಸ್ಯೆಗೆ ಗಂಡಾಂತರವೇನೂ ಆಗಿಲ್ಲವಲ್ಲಾ.'

'ಆಗಿಲ್ಲ.'

'ಇನ್ನು ಹಿಂದೂಸ್ಥಾನ ಸ್ವಾತಂತ್ರ್ಯವನ್ನು ಗಳಿಸಿಕೊಂಡು ಒಂದು ರಾಷ್ಟ್ರವಾದ ಮೇಲೆ ತಾನೆ ಈ ಪ್ರಶ್ನೆ ಏಳುವುದು?'

'ಹೌದು. ಆದರೆ ಅದಕ್ಕೆ ಏಕ ಭಾಷೆ ಒಂದು ಸಾಧನವಲ್ಲವೇ?'

'ಸ್ವತಂತ್ರವಾಗಿರುವ ಯಾವ ರಾಷ್ಟ್ರದಲ್ಲಿ ಏಕ ಭಾಷೆ ಪ್ರಚಾರದಲ್ಲಿದೆ ಹೇಳಿ. ಅಮೆರಿಕಾ, ಸ್ವಿಟ್ಜರ್ಲೆಂಡ್, ಇಂಗ್ಲೆಂಡ್, ರಷ್ಯಾ ದೇಶಗಳಲ್ಲೆಲ್ಲಾ ಹಲವಾರು ಭಾಷೆಗಳು ಪ್ರಚಾರದಲ್ಲಿಲ್ಲವೇ? ಹಿಂದೂಸ್ಥಾನಕ್ಕೆ ಸ್ವಾತಂತ್ರ್ಯ

ಸಿಕ್ಕದಂತೆ ಮಾಡುವುದಕ್ಕೆ ಆಳರಸರು ಹೂಡಿದ ಒಂದು ಕುಹಕವಿದು. ನಮ್ಮವರೂ ಅದೇ ಕಿನ್ನರಿಯನ್ನು ಬಾರಿಸುತ್ತ ಹೊರಟಿದ್ದಾರೆ.'

'ಗಾಂಧೀಜಿಯರೇ ಇದರ ಪುರಸ್ಕರ್ತರಾಗಿದ್ದಾರಲ್ಲಾ.'

'ಗಾಂಧೀಜಿಯವರು ಹೇಳಿದ್ದೊಂದು, ಜನ ತಿಳಿದುಕೊಂಡದ್ದೊಂದು. ದೊಡ್ಡವರ ಮಾತು ಸಣ್ಣವರ ಮೂಲಕ ಬಂದಾಗ ಪರ್ವತಧಾರೆ ಕಿರುಗಾಲವೆಯಲ್ಲಿ ಹರಿದಂತೆ ಆಗುತ್ತದೆ. ಗಾಂಧೀಜಿಯವರು ವ್ಯವಹಾರ ದೃಷ್ಟಿಯಿಂದ ಏಕ ಭಾಷೆ ಬೇಕೆಂದರು. ಹಿಂದಿಯನ್ನು ಹಿಂದೂಸ್ಥಾನದ ಹತ್ತನೆಯ ನಾಲ್ಕು ಅಂಶ ಜನ ಮಾತಾಡುವುದರಿಂದ ಅದನ್ನು ರಾಷ್ಟ್ರ ಭಾಷೆಯನ್ನಾಗಿ ಅಳವಡಿಸಿಕೊಳ್ಳಬೇಕೆಂದು ಹೇಳಿದರು.'

'ನ್ಯಾಯವಾಗಿಯೇ ಇದೆ. ಭಿನ್ನಾಭಿಪ್ರಾಯಕ್ಕೆ ಅವಕಾಶವೆಲ್ಲಿಂದ ಬಂತು.'

'ಬರುತ್ತದೆ. ಮೂಲ ತತ್ವದಲ್ಲಲ್ಲ, ಸೂಕ್ಷ್ಮ ಆಚರಣೆಯಲ್ಲಿ—ಗಾಂಧೀಜಿಯವರು ಹಿಂದಿಯನ್ನು ಬಲವದ್ಬಂಧನದಿಂದ ಪ್ರಚಾರ ಮಾಡಬೇಕೆಂದು ಹೇಳಲಿಲ್ಲ—ಅಲ್ಲವೇ?'

'ಹೌದು.'

'ಚಕ್ರವರ್ತಿ ರಾಜಗೋಪಾಲಾಚಾರ್ಯರು ಕಾಂಗ್ರೆಸ್ ಮಂತ್ರಿಮಂಡಳವನ್ನು ಸ್ಥಾಪಿಸಿದ ಕೂಡಲೆ ಮದರಾಸು ಪ್ರಾಂತ್ಯದಲ್ಲಿ ಕಾನೂನಿನ ಮರೆಹೊಕ್ಕರು. ತಮ್ಮ ತತ್ವಕ್ಕೆ ವಿರೋಧಿಸಿದವರನ್ನು ಕಾರಾಗಾರಕ್ಕೆ ಕಳುಹಿಸಿದರು. ಬ್ರಿಟಿಷ್ ಸಾಮ್ರಾಜ್ಯವಾದಿಗಳನ್ನು ಮೀರಿಸುವಷ್ಟು ದಬ್ಬಾಳಿಕೆ ನಡಿಸಿಬಿಟ್ಟರು.'

'ಹೌದು. ತುಂಬ ಅನ್ಯಾಯ ಮಾಡಿ ಅನವಶ್ಯಕವಾಗಿ ದ್ವೇಷಾಸೂಯೆಗಳನ್ನು ಜನತೆಯಲ್ಲಿ ಬಿತ್ತಿದರು.'

'ಗಾಂಧೀಜಿಯವರು ಹಿಂದೀ ಪ್ರಾಂತ್ಯಭಾಷೆಗಳನ್ನು ಪ್ರತಿಭಟಿಸಕೂಡದೆಂದೂ, ಅವುಗಳ ಮೇಲೆ ಅಪಪ್ರಚಾರ ಮಾಡಕೂಡದೆಂದೂ ಖಂಡಿತವಾಗಿ ಹೇಳಿಲ್ಲವೇ?'

'ಹೇಳಿದ್ದಾರೆ.'

'ಹಿಂದೀ ಪ್ರಚಾರಕರು ಏನು ಮಾಡಿದರು? ಹೋದ ಹೋದ ಕಡೆ

ಪ್ರಾಂತ್ಯಭಾಷೆ, ಸಾಹಿತ್ಯ, ಸಂಸ್ಕೃತಿಗಳನ್ನು ತೆಗಳುತ್ತ ಬಂದರು. ಹಿಂದೀ ಪ್ರಚಾರವನ್ನು ಮರೆತು ಅವರು ಪ್ರಾಂತ್ಯ ಭಾಷೆಗಳ ಅಪ-ಪ್ರಚಾರವನ್ನು ಮಾಡಿದರು. ಸ್ಥಳೀಯ ಸಂಸ್ಥೆಗಳ ನೆರವು ಪಡೆದು ಪ್ರಾಂತ್ಯ ಭಾಷೆಗಳನ್ನು ಉಪವಾಸ ಸಾಯಿಸುತ್ತಾ ಬಂದರು.'

'ತಪ್ಪು ಸ್ಥಳೀಯ ಸಂಸ್ಥೆಗಳದೇ ವಿನಾ ಗಾಂಧೀಜಿಯವರದಲ್ಲ— ಹಿಂದೀ ಪ್ರಚಾರಕರದೂ ಅಲ್ಲ.'

'ನಿಮ್ಮ ತಿಳವಳಿಕೆ ತಪ್ಪು. ಗಾಂಧಿ, ನೆಹರು, ಅಜಾದರ ಹೆಸರುಗಳನ್ನು ಮುಂದೆ ಮಾಡಿಕೊಂಡು ಪ್ರಚಾರಕರು ನಿಂತರು. ಕಾಂಗ್ರೆಸ್ಸಿನ ಭಕ್ತರಾಗಿದ್ದ ಸ್ಥಳೀಯ ಸಂಸ್ಥೆಗಳ ಪ್ರವರ್ತಕರು ದೊಡ್ಡ ಹೆಸರುಗಳಿಗೆ ಮರುಳಾಗಿ ಆತ್ಮಘಾತ ಮಾಡಿಕೊಳ್ಳಲಾರಂಭಿಸಿದರು.'

'ಹಿಂದೀ ಪ್ರಚಾರ ಸಂಸ್ಥೆಗಳ ಮೇಲೆ ನಿಮ್ಮ ಆಕ್ಷೇಪವೇನು?'

'ಎರಡು. ಒಂದು, ಅದು ಬಂಡವಾಳಗಾರರ ಸಂಸ್ಥೆ. ಕನ್ನಡ ನಾಡು ಬಡವರ ದೇಶ. ಇಲ್ಲಿ ಹಣ ಕೊಟ್ಟು ಪ್ರಚಾರ ನಡೆಸುವ ಸಂಸ್ಥೆಗಳಿಲ್ಲ. ಈ ಕಾರಣದಿಂದ ಹಣದ ಸೌಲಭ್ಯವಿದೆಯೆಂದು ಹಿಂದೀ ಪ್ರಚಾರ ಸಂಘಗಳು ಕನ್ನಡದ ಮೇಲೆ ಧಾಳಿ ನಡೆಸಿದವು. ಎರಡು, ಪ್ರಚಾರಕರ ಉದ್ದೇಶ. Hindi Imperialism (ಹಿಂದೀ ಸಾಮ್ರಾಜ್ಯವಾದ) ಸ್ಥಾಪಿಸುವುದು. ಗುರುದೇವ ರವೀಂದ್ರರು ಹೇಳಿದಂತೆ ಸ್ವಾಭಿಮಾನವುಳ್ಳ ಯಾವ ನಾಡಿನವನೇ ಆಗಲಿ, ಭಾಷಾಸಂಬಂಧಿ ಸಾಮ್ರಾಜ್ಯವಾದವನ್ನು ಸಹಿಸನು.'

'ಇದಕ್ಕೆ ಪರಿಹಾರವೇನು?'

'ರವೀಂದ್ರರೇ ಅದನ್ನೂ ಸೂಚಿಸಿದ್ದಾರೆ. 'Do not rest content with the accidental advantage of your numbers. Attract people by creating great creative literature.' (ಹಿಂದೀ ಮಾತಾಡುವವರ ಸಂಖ್ಯೆ ತುಂಬ ಇದೆಯೆಂದು ಸಂತುಷ್ಟರಾಗಿ ಕೂಡಬೇಡಿ. ಅದೊಂದು ಆಕಸ್ಮಿಕ ಅನುಕೂಲ ಲಾಭ ಮಾತ್ರ. ನೀವು ಉಚ್ಚ ಕೋಟಿಯ ಸೃಷ್ಟಿಕಾರಕ ಸಾಹಿತ್ಯವನ್ನು ರಚಿಸಿ ಜನರನ್ನು ಆಕರ್ಷಿಸಿರಿ.)

ಹಿಂದೀ ಪ್ರಚಾರಕರು ಕೇವಲ ಭಾಷಾ ಪ್ರಚಾರವಲ್ಲ, ಜನತೆಯಲ್ಲಿ ಸಾಹಿತ್ಯ ಸಂಸ್ಕೃತಿಯ ಪ್ರಸಾರವನ್ನೂ ಕೈಗೊಳ್ಳಬೇಕು.'

'ಆ ಬಗ್ಗೆ ನಿಮ್ಮ ವಿರೋಧವಿಲ್ಲವೇ?'

'ನಾನು ಅದನ್ನು ಹೃತ್ಪೂರ್ವಕ ಸ್ವಾಗತಿಸುತ್ತೇನೆ. ಹಿಂದೀ-ಕನ್ನಡದ ಬಗ್ಗೆ ನಾನೆಷ್ಟು ವಿರೋಧವನ್ನು ವ್ಯಕ್ತಪಡಿಸಿದ್ದೇನೆಯೋ ಅದರ ಹತ್ತರಷ್ಟು ಸಾಂಸ್ಕೃತಿಕ ಬಾಂಧವ್ಯಕ್ಕಾಗಿ ಹೆಣಗಾಡುತ್ತಿದ್ದೇನೆ. ಹಿಂದಿಯ ಕಥೆ ಕಾದಂಬರಿಗಳು ಕನ್ನಡಕ್ಕೆ ಅನುವಾದವಾಗಲು ಶ್ರಮಿಸುತ್ತಿದ್ದೇನೆ. ಹಾಗೇ ಹಿಂದಿ ಜನಗಳಿಗೆ ಕನ್ನಡದ ಬಗ್ಗೆ ಅರಿವುಂಟುಮಾಡಿಕೊಡಲೆತ್ನಿಸುತ್ತಿದ್ದೇನೆ. ಭಾರತದಲ್ಲಿ ಮೂಡಿರುವ ಈ ಅನೈಕಮತ್ಯಕ್ಕೆ ಸಾಕಷ್ಟು ಪರಸ್ಪರ ಬಳಕೆ, ಪರಿಚಯಗಳಿಲ್ಲದಿರುವುದೇ ಕಾರಣವೆಂದು ನನ್ನ ಮತ. ಪ್ರಸಾರದೃಷ್ಟಿಯಿಂದ ಕೆಲಸ ಮಾಡುತ್ತಿರುವವರು ತಾವು ದಿಗ್ವಿಜಯ ಮಾಡುತ್ತಿದ್ದೇವೆಂದು ಭಾವಿಸಿರುತ್ತಾರೆ. ಇದು ತಪ್ಪು. ನಮ್ಮ ದುರ್ದೈವ ನೋಡಿ—ಫ್ರೆಂಚ್, ಇಂಗ್ಲಿಷ್, ರಷ್ಯನ್, ಜರ್ಮನ್, ಇಟಾಲಿಯನ್ ಕವಿಗಳು, ಕತೆಗಾರರು, ವಿಮರ್ಶಕರು ಇವರ ಬಗ್ಗೆ ಸಾಕಷ್ಟು ಗೊತ್ತಿದೆ.—ಹೆಚ್ಚು ತಿಳಿಯಲು ಬಯಸಿದರೆ ಅಪಾರವಾದ ಅನುಕೂಲವಿದೆ. ನಮ್ಮ ದೇಶಭಾಷೆಗಳ ಬಗ್ಗೆ ಎಂತಹ ದಾರಿದ್ರ್ಯ ಮೂಡಿದೆ ನೋಡಿ. ನೆರೆ ಪ್ರಾಂತ್ಯಗಳಾದ ತಮಿಳು, ತೆಲುಗಿನ ಬಗ್ಗೆ ಕೂಡ ನಮಗೇನೂ ಗೊತ್ತಿಲ್ಲ. ಹಿಂದೀ, ಬಂಗಾಳಿ, ಗುಜರಾತಿ, ಅಸಾಮೀ ಹೆಸರುಗಳನ್ನು ಮಾತ್ರ ಕೇಳಿಬಲ್ಲೆವು.'

'ಈ ಅಜ್ಞಾನಾಂಧಕಾರವನ್ನು ಹೋಗಲಾಡಿಸುವುದು ಹೇಗೆ?'

'ಮುಂಬಯಿಯ ಪಿ. ಇ. ಎನ್. ಸಂಸ್ಥೆ ಮೇಲ್ಪಂಕ್ತಿ ಹಾಕಿ ತೋರಿಸಿದೆ. ಎಲ್ಲಾ ಭಾರತೀಯ ಭಾಷೆಗಳ ಸಾಹಿತ್ಯ ಪರಿಚಯ ಮಾಡಿಕೊಡುವ ಒಂದು ಉತ್ತಮ ವರ್ಗದ ಮಾಸಪತ್ರಿಕೆಯನ್ನು ನಡೆಸುತ್ತಿದೆ. ಇದುವರೆಗೆ ಅಸಾಮಿ, ಬಂಗಾಳಿ ಭಾಷಾ ಸಾಹಿತ್ಯ ಇತಿಹಾಸಗಳನ್ನು ಪ್ರಕಟಿಸಿದೆ. ಮುಂದೆ ಬೇರೆ ಬೇರೆ ಭಾಷೆಗಳ ಸಾಹಿತ್ಯೇತಿಹಾಸಗಳನ್ನು ಪ್ರಕಟಿಸುತ್ತದೆ. ಪ್ರತಿಯೊಂದು ಭಾರತೀಯ ಭಾಷೆಯಲ್ಲಿಯೂ ಇಂತಹ ಪ್ರಯತ್ನವಾಗಬೇಕು.'

'ಪರಿಷತ್ತು ಈ ಕಾರ್ಯವನ್ನೇಕೆ ಕೈಗೊಳ್ಳಬಾರದು?'

'ಪರಿಷತ್ತು ಕೈಗೊಳ್ಳಬೇಕಾದ ಅನೇಕ ಕಾರ್ಯಗಳಲ್ಲಿ ಇದೊಂದು. ಈ ಸಂಸ್ಥೆಗೆ ಮೊದಲು ಆಕ್ಸಿಜನ್ ಗ್ಯಾಸ್ ಕೊಟ್ಟು ಬದುಕಿಸಿ ಅನಂತರ ಮುಂದಿನ ವಿಷಯವನ್ನು ಯೋಚಿಸಬೇಕಾಗಿದೆ.'

'ಹಿಂದಿಯ ಬಗ್ಗೆ ಇಂದು ಪರಿಷತ್ತು ತಳೆದಿರುವ ಧೋರಣೆಯೇನು?'

'ಹರಿಯುವ ಹೊಳೆಯಲ್ಲಿ ತೇಲುವುದು (Drifting); ಹಿಂದೆ ಪರಿಷತ್ತು ತಾನೇ ಈ ಸಮಸ್ಯೆಯನ್ನು ಹುಟ್ಟಿಹಾಕಿತು. ಆಗ ಪರಿಷತ್ತಿನ ಉಪಾಧ್ಯಕ್ಷರಾಗಿದ್ದ ಶ್ರೀ. ಡಿ. ವಿ. ಗುಂಡಪ್ಪನವರೂ, ಪರಿಷತ್ಪತ್ರಿಕೆಯ ಸಂಪಾದಕರಾಗಿದ್ದ ಪ್ರೊ. ಎ. ಆರ್. ಕೃಷ್ಣಶಾಸ್ತ್ರಿಗಳೂ ಗಂಡುಗಲಿಗಳಂತೆ ಕಾದಿದರು. ಪ್ರೊ. ಬಿ. ಎಂ. ಶ್ರೀಕಂಠಯ್ಯನವರು ಉಪಾಧ್ಯಕ್ಷರಾದರು. ಇವರೆ ಕೆಲ ಕಾಲ ಅವರೂ ಹಿಂದಿಯ ಧಾಳಿಯನ್ನು ಎದುರಿಸಿ ಹೋರಾಡಿದರು. ಆವರೆ ಒಂದು ದಿನ ಶ್ರೀ. ರಂ. ರಾ. ದಿವಾಕರರನ್ನು ಬಳ್ಳಾರಿ ಸಾಹಿತ್ಯ ಸಮ್ಮೇಳನಕ್ಕೆ ಅಧ್ಯಕ್ಷರನ್ನಾಗಿ ಮಾಡಿದರು. ಅಂದಿನಿಂದ ಶ್ರೀ ಶ್ರೀಯವರ ಧೋರಣೆ ಬದಲಾಯಿಸಿತು. ಪರಿಷತ್ತಿನ ಸಮ್ಮೇಳನಾಧ್ಯಕ್ಷರಾಗಿದ್ದ ಶ್ರೀ ದಿವಾಕರರವರು ಹಿಂದೀ ಪ್ರಚಾರಕ್ಕೆ ಬಂದರು. ಸರ್ಕಾರದ ಮರೆಹೊಕ್ಕರು. ದೇಶವೆಲ್ಲೆಲ್ಲಾ ಸಂಚರಿಸಿ ಹಿಂದೀ ಪ್ರಸಾರ ಮಾಡಿದರು. ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷರೇ ಹಿಂದೀ ಪ್ರಚಾರ ಮಾಡುತ್ತಾರೆಂದ ಮೇಲೆ ಹಿಂದೀ ಪ್ರಚಾರಕರಿಗೆ ಏನು ಕಡಿಮೆಯಾದ ಹಾಗಾಯಿತು. ಪರಿಣಾಮ-ಕರ್ನಾಟಕ ಸಂಘಗಳು, ಹಿಂದೀ ಪ್ರಚಾರಕ ಸಂಘಗಳಾಗುತ್ತ ಬಂದವು; ಕನ್ನಡದ ಕೆಲಸಗಾರರು ಹಿಂದೀ ಪ್ರಚಾರಕರಾಗುತ್ತ ಬಂದರು; ಸ್ಥಳೀಯ ಸಂಸ್ಥೆಗಳು, ಕನ್ನಡ ವಾಚನಾಲಯ, ಪುಸ್ತಕ ಭಂಡಾರಗಳಿಗೆ ಕೊಡುತ್ತಿದ್ದ ಹಣವನ್ನು ಹಿಂದಿಗೆ ಕೊಡುತ್ತ ಬಂದರು; ಶಾಲೆ ಕಾಲೇಜುಗಳಿಗೆ ಹಿಂದಿ ಕಾಲಿಟ್ಟು ಕನ್ನಡ ವನ್ನು ಒತ್ತರಿಸುತ್ತ ಬಂದಿತು; ಹೆಣ್ಣು ಮಕ್ಕಳು ಬಯಲು ಭ್ರಾಂತಿಯಿಂದ ಹಿಂಡು ಹಿಂಡಾಗಿ ಹಿಂದಿಯನ್ನು ಕಲಿಯುತ್ತ ಬಂದರು. ಕನ್ನಡಕ್ಕೆ ಸರ್ವತೋ ಮುಖವಾದ ಪೆಟ್ಟು ಬೀಳುತ್ತ ಬಂದಿತು. ಆಗ ನಾನು ಪರಿಷತ್ತಿನ ವಾರ ಪತ್ರಿಕೆಯ ಸಂಪಾದಕನಾಗಿದ್ದೆ. ಎಚ್ಚರ ಕೊಟ್ಟೆ—ದಿವಾಕರರ ದೇಶದ್ರೋಹ ವನ್ನು ಖಂಡಿಸಿದೆ. ಶ್ರೀ ಶ್ರೀಯವರು ಕುಪಿತರಾದರು. ದಿವಾಕರರಿಗೆ

ನಾನು ಶರಣಾಗತನಾಗಬೇಕೆಂದರು-ನಾನು ಸಾಧ್ಯವಿಲ್ಲವೆಂದೆ-ನನ್ನ ಪರವಾಗಿ ತಾವೇ ಆ ಕೆಲಸ ಮಾಡಲು ಮುಂದುವರಿದರು. ನನ್ನ ಹೆಸರಿರುವ ಕನ್ನಡ ನುಡಿಯಲ್ಲಿ 'ಕ್ಷಮಾ ಯಾಚನೆ' ಬರಕೂಡದೆಂದು ಕನ್ನಡ ನುಡಿಗೆ ನನ್ನ ಅಂತ್ಯ ಪ್ರಣಾಮವನ್ನು ಸಲ್ಲಿಸಿಬಿಟ್ಟೆ. ಅಂದಿನಿಂದ ಹಿರಿಯರ ಕಣ್ಣಿಗೆ ನಾನೊಬ್ಬ ಕ್ರಾಂತಿ ಪುರುಷ, ಅಶ್ಲೀಲ ವ್ಯಕ್ತಿ, ವಿವೇಕಶೂನ್ಯನಾದ ಬಿಸಿ ರಕ್ತದ ಒಬ್ಬ ಬಂಡಾಯಗಾರ.'

'ಅಂದಿಗೂ ಇಂದಿಗೂ ಪರಿಷತ್ತಿನಲ್ಲಿ ಏನೂ ಬದಲಾವಣೆಯಾಗಿಲ್ಲವೇ?'

'ಆಗಿದೆ. ವ್ಯಕ್ತಿಗಳು ಬದಲಾಯಿಸಿದ್ದಾರೆ. ಆದರೆ ಅದೇ ಮನೋಧರ್ಮ—ಅದೇ ಸಂಕುಚಿತ ಮನಸ್ಸು- ಅದೇ ನೈಚ್ಯಾನುಸಂಧಾನ.'

'ಸಂಕುಚಿತ ಮನಸ್ಸೇ!'

'ಹೌದು. ನಾನು ವೀರಶೈವ ಸಾಹಿತ್ಯ ಸಂಸ್ಕೃತಿ ಗ್ರಂಥ ಬರೆದದ್ದಕ್ಕೆ ಇಂದಿನವರು ಲಿಂಗಾಯತರನ್ನು ಎತ್ತಿ ಕಟ್ಟಿ ಪರಿಷತ್ತಿಗೆ ವಿರೋಧವಾಗಿ ನಡೆಯುತ್ತಿದ್ದೇನೆಂದು ಹೇಳುತ್ತಿದ್ದಾರೆ.'

'ಹಾಗಾದರೆ ಸಾಂಸ್ಕೃತಿಕ ಸಂಘಟನೆಗೆ ಕರ್ನಾಟಕದಲ್ಲಿ ಎಡೆಯೇ ಇಲ್ಲವೇ?'

'ಏಕಿಲ್ಲ---ನಮ್ಮ ನಿಮ್ಮಂತಹ ಪುರೋಗಾಮಿಗಳು ಸತ್ತುಹೋಗಿದ್ದಾರೆಯೇ? ವೈಯಕ್ತಿಕವಾಗಿ ನಮ್ಮಿಂದ ಎಷ್ಟು ಸಾಧ್ಯವೋ ಅಷ್ಟು ಮಾಡೋಣ. ಬೇರೆ ಭಾಷೆಗಳಿಂದ ಧಾರಾಳವಾಗಿ ಬೆಳಕನ್ನು ತೆಗೆದುಕೊಳ್ಳೋಣ.—ನಮ್ಮ ಬೆಳಕನ್ನು ಅವರಿಗೆ ಔದಾರ್ಯದಿಂದ ನೀಡೋಣ.'

'ಹಿಂದಿಯ ಬಗ್ಗೆ ಇಂದಿನ ನಮ್ಮ ಧೋರಣೆಯೇನು?'

'ಸ್ನೇಹ ಮತ್ತು ಸೌಹಾರ್ದ. ಹಿಂದೀ ಪ್ರಚಾರಕರಲ್ಲಿಯೂ ಸಾಕಷ್ಟು ವಿಚಾರಪರಿವರ್ತನೆಯಾಗಿದೆ. ಸಂಸ್ಕೃತಿಯ ಕಡೆಗೆ ಅವರ ಲಕ್ಷ್ಯ ಹೋಗಿದೆ. ಮೈಸೂರಿನ ಕೆಲವು ಹಿಂದೀ ಪ್ರಚಾರಕ ಕೇಂದ್ರಗಳು ಕನ್ನಡ ದಿನಗಳನ್ನು ಆಚರಿಸುತ್ತಿದ್ದಾರೆ. ಕನ್ನಡ ಸಾಹಿತ್ಯ, ಸಾಹಿತಿಗಳ ಸ್ನೇಹ, ಸೌಹಾರ್ದವನ್ನು ಬಯಸುತ್ತಿದ್ದಾರೆ. ಅಪಪ್ರಚಾರವನ್ನು ಬಿಡುತ್ತಿದ್ದಾರೆ. ನಮಗೆ ಬೇಕಾದುದೂ ಇದೇ ತಾನೇ. ಕನ್ನಡಕ್ಕೆ

ಧಕ್ಕೆ ತಗಲದಂತೆ ಹಿಂದೀ ಪ್ರಚಾರ ಮಾಡಿಕೊಳ್ಳಲಿ. ಹಿಂದೀ ಜನ ಕನ್ನಡಿಗರಾದರೆ ಅವರ ಕರ್ತವ್ಯ ಮೊದಲು ತಮ್ಮ ಭಾಷೆಗೆ, ಅನಂತರ ಹಿಂದಿಗೆ ಎಂಬುದನ್ನು ಗ್ರಹಿಸಲಿ. ಎಲ್ಲ ಘರ್ಷಣೆಯೂ ಕೊನೆಗಾಣುತ್ತದೆ. ಹಿಂದೀ ಪ್ರಸಾರದ ರೀತಿಯಲ್ಲಿ ಕನ್ನಡ ಪ್ರಸಾರವಾಗಬೇಕು. ಹಿಂದೂಸ್ಥಾನದ ಬೇರೆ ಬೇರೆ ಪ್ರಾಂತ್ಯಗಳಿಗೆ ಕನ್ನಡ ಪ್ರಸಾರಕರನ್ನು ಕಳುಹಿಸಿಕೊಡಬೇಕು. ಬೇರೆ ಬೇರೆ ಭಾಷೆಗಳಲ್ಲಿ ಕನ್ನಡ ಗ್ರಂಥಗಳ ಅನುವಾದ ಬರುವಂತೆ ಮಾಡಬೇಕು. ಹಿಂದೀ ಪ್ರಸಾರಕರ ನಿಷ್ಠೆ, ಕೆಚ್ಚು, ಸ್ಥೈರ್ಯ, ಕರ್ತವ್ಯಪ್ರೇಮ ಕನ್ನಡ ಸೇವಕರಲ್ಲಿಯೂ ಮೂಡಬೇಕು.'

'ಹಿಂದಿಯ ಏಕಭಾಷಾ—ಏಕಲಿಪಿಯ ವಾದಕ್ಕೆ ನಿಮ್ಮ ಉತ್ತರ ವೇನು?'

'ಅದನ್ನು ದೇಶಕ್ಕೆ ಸ್ವಾತಂತ್ರ್ಯ ಬಂದ ಮೇಲೆ ಇಟ್ಟುಕೊಳ್ಳೋಣ. ಆಗ ಹಿಂದಿಯೇ ಭಾರತದ ಭಾಷೆಯಾಗುತ್ತದೆಯೋ, ಕನ್ನಡವೇ ಆಗುತ್ತದೆಯೋ, ಇಂಗ್ಲೀಷಾಗುತ್ತದೆಯೋ ಖಚಿತವಾಗಿ ಹೇಳಬಲ್ಲವರು ಯಾರು? ರಾಷ್ಟ್ರೀಯತೆ ಒಂದು ಸಾಧಿಸಿದ ಮೇಲೆ—ಅಂತರ-ರಾಷ್ಟ್ರೀಯತೆಯ ಸಮಸ್ಯೆಯೇಳುತ್ತದೆ. ಆಗ ನಮ್ಮ ವ್ಯವಹಾರ ಕೇವಲ ಭರತಖಂಡಲ್ಲಿ ಭರತಖಂಡಕ್ಕೇ ಮುಗಿಯುವುದಿಲ್ಲ—ಜಗತ್ತಿನ ಸಂಬಂಧ ನಿಕಟವಾಗುತ್ತದೆ. ಆಗ ಜಗತ್ತಿನ ಭಾಷೆಯನ್ನು ನಾವೂ ಅವಲಂಬಿಸಬೇಕಾಗುತ್ತದೆ.'

'ಎಲ್ಲಿಂದ ಎಲ್ಲಿಗೆ ಬಂದರೂ ನೀವು ಕನ್ನಡತನಕ್ಕೇ ಮೊದಲು ಬೆಲೆ ಕೊಡುವುದು.'

'ನಿಸ್ಸಂದೇಹವಾಗಿ. ಬಲಿಷ್ಠ ಕರ್ನಾಟಕ, ಆಂಧ್ರ, ಮಹಾರಾಷ್ಟ್ರ, ಬಂಗಾಳ ತಮ್ಮ ಪ್ರಾಂತೀಯ ವೈಶಿಷ್ಟ್ಯವನ್ನುಳಿಸಿಕೊಂಡು, ಏಕತ್ರವಾದ ರಾಷ್ಟ್ರಿಯ ಭಾವನೆಯನ್ನು ಬೆಳಸಿಕೊಳ್ಳಬೇಕು. ದುರ್ಬಲ ಪ್ರಾಂತ್ಯ ಯಾವಾಗಲೂ ರಾಷ್ಟ್ರೀಯತೆಯ ಶತ್ರುವೆಂಬುದನ್ನು ಮರೆಯಬಾರದು. ಈ ದೃಷ್ಟಿಯಿಂದಲೇ ನಾವು ಕನ್ನಡ—ಕನ್ನಡ ಎಂದು ಹಲಬುವುದು. ಕೆಲವರ ಕಣ್ಣಿಗೆ ನಾವು ಸಂಕುಚಿತ ಮನೋಭಾವದವರಾಗಿ ಕಂಡುಬರಬಹುದು. ವಿಧಿಯಿಲ್ಲ. ಕಾಲ ಎಲ್ಲವನ್ನೂ ನಿರ್ಣಯಿಸುತ್ತದೆ.'

‘ಪ್ರಾಯಶಃ ಮುಂದಿನ ಭಾರತದ ಕನಸು ಕಾಣುವಂತೆ ಕೃಷ್ಣರಾಯರು ಸ್ತಬ್ಧರಾದರು. ನಾನೂ ಸ್ವಲ್ಪ ಹೊತ್ತು ಸುಮ್ಮನೆ ಕುಳಿತೆ. ಅವರ ಸಂದೇಶ ನನ್ನನ್ನು ಹುರಿದುಂಬಿಸಿತ್ತು. ಅವರ ಮೌನತಪಕ್ಕೆ ಭಂಗ ತರಬಾರದೆಂದು ಎದ್ದೆ.’

‘ಅಪ್ಪಣೆಯಾದರೆ ಹೊರಡುತ್ತೇನೆ’ ಎಂದೆ.

‘ಒಳ್ಳೆಯದು.’

ಎಂದು ಮತ್ತೆ ಸುಮ್ಮನಾದರು. ನಾನು ಹೊರಟು ಬಂದೆ. ಇದನ್ನು ಅಪಚಾರವೆಂದು ನಾನೆಣಿಸಲಿಲ್ಲ. ಭಾವಜೀವಿಯ ಒಂದೊಂದು ವರ್ತನೆ ಶಿಷ್ಟಸಂಪ್ರದಾಯಕ್ಕೆ ವಿರುದ್ಧವಾಗಿ ಕಂಡುಬಂದರೂ ಅದರಲ್ಲಿ ಸತ್ಸಂಪ್ರದಾಯದ ವಿಶಿಷ್ಟತೆಯೆ ಇರುತ್ತದೆ.

---

# ಪಾ ಕಿ ಸ್ತಾ ನ

ಪಾಕೀಸ್ತಾನದ ಪ್ರಶ್ನೆ ನನ್ನನ್ನು ಬಹುವಾಗಿ ಕಾಡುತ್ತಿತ್ತು. ಹಿಂದೂಸ್ಥಾನದ ಸ್ವಾತಂತ್ರ್ಯಾಪೇಕ್ಷಿಗಳೆಲ್ಲರ ತಲೆಯನ್ನೂ ಕೆಡಿಸುವ ಮಹಾ ಸಮಸ್ಯೆ ಇದು. ರಾಜಕೀಯ ಧುರೀಣರ ಮತಗಳನ್ನು ಸಂಗ್ರಹಿಸಿಕೊಂಡಿದ್ದೆ. ಸಾಹಿತಿಗಳು ಇದರ ಬಗ್ಗೆ ಏನಾದರೂ ವಿಚಾರ ಮಾಡಿದ್ದಾರೆಯೋ ಎಂದು ತಿಳಿಯುವ ಕುತೂಹಲವಾಯಿತು. ಶ್ರೀ ಕೃಷ್ಣರಾಯರನ್ನು ಕಾಣ ಹೋದೆ. ವರಾಂಡದಲ್ಲಿಯೇ ಅವರ ದರ್ಶನವಾಯಿತು. ಯಥಾ ಪ್ರಕಾರ ಕೈಯಲ್ಲಿ ಸಿಗರೇಟ್ ಹಿಡಿದು ಚಿಂತಾಮಗ್ನರಾಗಿ ಕುಳಿತಿದ್ದರು. ನನ್ನನ್ನು ಕಂಡ ಕೂಡಲೇ 'ಬನ್ನಿ, ಬನ್ನಿ' ಎಂದು ಆದರದಿಂದ ಸ್ವಾಗತಿಸಿದರು.

'ಏನೋ ವಿಚಾರ ಮಾಡುತ್ತಿದ್ದೀರಿ.'

'ಹೌದು. ಈ ವಿಚಾರಗಳ ವಿಕಲ್ಪದಿಂದ ಎಂದು ಪಾರಾಗುತ್ತೀನೆಯೋ?'

'ಆ ವಿಕಲ್ಪವನ್ನೇ ಮತ್ತಷ್ಟು ಪ್ರೋಷಿಸಲು ನಾನು ಬಂದಿದ್ದೇನೆ.'

'ಬಹಳ ಸಂತೋಷ. ಇಂದು ಯಾವ ವಿಷಯ ನಿಮ್ಮನ್ನು ಕಾಡಿಸುತ್ತಿದೆ.'

'ದೇಶವನ್ನೇ ಕಾಡಿಸುತ್ತಿರುವ ಪಾಕಿಸ್ತಾನದ ಪ್ರಶ್ನೆ.'

'ಅದೊಂದು ಗಾಂಢೀವವಾಗಿದೆಯಲ್ಲವೇ?'

'ಹೌದು. ನೀವು ವಿಷಯವನ್ನು ಹೇಗೆ ಪೃಥಃಕ್ಕರಿಸುವಿರಿ?'

'ಪಾಕಿಸ್ತಾನವೆಂದರೇನು ಮೊದಲು ಹೇಳಿ.'

'ಜಿನ್ನಾ ಸಾಹೇಬರ ಇಸ್ಲಾಮಿ ರಾಜ್ಯಸ್ಥಾಪನೆ. ಹಿಂದುಗಳನ್ನೆಲ್ಲಾ ಹೊಡೆದಟ್ಟಿ ಅಖಂಡ ಹಿಂದೂಸ್ಥಾನವನ್ನು ಇಸ್ಲಾಮಿ ಮಾಡಬೇಕೆಂಬ ಆಸೆ'.

'ನಿಮ್ಮ ಕಲ್ಪನೆ ಸಾಮಾನ್ಯವಾಗಿ ಎಲ್ಲರೂ ತಳೆದಿರುವ ಕಲ್ಪನೆಯಾಗಿದೆ. ಆದರೆ ಅದು ಸತ್ಯಕ್ಕೆ ಬಹಳ ದೂರವಾಗಿದೆ.'

'ಹಾಗಾದರೆ ಅವರ ಕಲ್ಪನೆಯೇನು?'

'ಮುಸಲ್ಮಾನರು ಅಧಿಕ ಸಂಖ್ಯಾತರಾಗಿರುವ ಸಿಂಧ್, ಬಂಗಾಳ, ವಾಯುವ್ಯ ಪ್ರಾಂತ್ಯಗಳಲ್ಲಿ ಮುಸಲ್ಮಾನರ ಆಧಿಪತ್ಯವಿರಬೇಕೆಂದು. ಅವುಗಳನ್ನು ಒಂದುಗೂಡಿಸಿ ಪಾಕೀಸ್ತಾನವೆಂಬ ಹೆಸರಿನಲ್ಲಿ ಹೊಸ ಪ್ರಾಂತ್ಯವೊಂದನ್ನು ನಿರ್ಮಾಣ ಮಾಡಬೇಕೆಂದು.'

'ಹಾಗಾದರೆ ಅಸಂಖ್ಯಾತ ಹಿಂದುಗಳಿರುವ ಹೈದರಾಬಾದಿಗೇನು ಹೇಳುವಿರಿ?'

'ಜಿನ್ನಾ ಸಾಹೇಬರ ತತ್ವವನ್ನು ನಾವು ಒಪ್ಪಿಕೊಳ್ಳುವುದಾದರೆ ಹೈದರಾಬಾದಿನ ನಿಜಾಮರು ಕಾಶ್ಮೀರಕ್ಕೂ, ಕಾಶ್ಮೀರದ ಹಿಂದೂ ಅರಸರು ಹೈದರಾಬಾದಿಗೂ ಬರಬೇಕಾಗುತ್ತದೆ.'

'ಪಾಕಿಸ್ತಾನವನ್ನು ನೀವು ಒಪ್ಪುವಿರಾ?'

'ಹೇಗೆ ಒಪ್ಪಲು ಸಾಧ್ಯ. ಬಂಗಾಳ, ಸಿಂಧ, ವಾಯುವ್ಯ ಪ್ರಾಂತ್ಯಗಳಲ್ಲಿ ಮುಸಲ್ಮಾನರಿಗೆ ಬೇಕಾದ ಸೌಕರ್ಯಗಳನ್ನು ಕೊಡಲು ನಾನು ಬೇಡವೆನ್ನುವುದಿಲ್ಲ. ಆದರೆ ಹಿಂದೂಸ್ಥಾನವನ್ನು ಪ್ರತ್ಯೇಕ ಹಿಂದೂ-ಮುಸ್ಲಿಮ ಪ್ರಾಂತ್ಯಗಳೆಂದು ವಿಭಾಗಿಸುವುದು ನಮ್ಮ ರಾಷ್ಟ್ರೀಯತೆಗೇ ಹಾನಿಕರ.'

'ಈ ಸಮಸ್ಯೆ ಪರಿಹಾರವಾಗುವುದು ಹೇಗೆ?'

'ಪರಸ್ಪರ ಸೌಹಾರ್ದ್ರ, ಮಿಳನಗಳಿಂದ.'

'ಆ ಕೆಲಸವನ್ನು ಮಹಾತ್ಮಾಜೀಯವರ ನಾಯಕತ್ವದಲ್ಲಿ ಕಾಂಗ್ರೆಸ್ಸು ಮಾಡಿ ವಿಫಲ ಹೊಂದಿದೆ.'

'ಕಾಂಗ್ರೆಸ್ ಆ ಕೆಲಸವನ್ನು ಮಾಡಿಯೂ ಇಲ್ಲ, ವಿಫಲ ಹೊಂದಿಯೂ ಇಲ್ಲ. ಮೊದಮೊದಲು ಮಹಾತ್ಮಾಜಿಯವರು ಆಲಿ ಸಹೋದರರನ್ನು ಕಟ್ಟಿಕೊಂಡು ಹಿಂದೂ-ಮುಸ್ಲಿಮ ಐಕಮತ್ಯ ಮಂತ್ರವನ್ನು ಪಠಿಸಿದರು. ಖಿಲಾಫತ್ತೇ ತಮ್ಮ ದೇವರೆಂದರು. ಅಳತೆ ಮೀರಿ ತುರ್ಕಿಯ ಜನತೆಗೆ

ಸಹಾಯವನ್ನೊದಗಿಸಿದರು. ಆ ಆಲಿ ಸಹೋದರರಲ್ಲಿ ಕಿರಿಯವರಾದ ಮೌಲಾನಾ ಮುಹಮ್ಮದ್ ಆಲಿಯವರು 'ಈ ಮಹಾತ್ಮನಿಗಿಂತ ಅತ್ಯಂತ ಕೀಳಾದ ಮುಸಲ್ಮಾನ ನನ್ನ ಕಣ್ಣಿಗೆ ಮೇಲು' ಎಂದು ಗಾಂಧೀಜಿಯವರನ್ನು ಒತ್ತರಿಸಿಬಿಟ್ಟರು. ಅವರ ಅಣ್ಣಂದಿರು ಕಾಂಗ್ರೆಸ್ ಸಂಸ್ಥೆಗೆ ಶರಣು ಹೊಡೆದು ಪಾನ್-ಇಸ್ಲಾಮ್ ಚಳುವಳಿಯನ್ನು ಹೂಡಿದರು. ದೇಶದ ಮುಸ್ಲಿಮ ಗುಂಡಾಗಳನ್ನು ಕಟ್ಟಿಕೊಂಡು ಭಯಂಕರ ಕೋಲಾಹಲ ಮಾಡಿದರು. ಈ ಮಧ್ಯೆ ಕಾಂಗ್ರೆಸ್ ಒಳಗೊಳಗೇ ಹಿಂದೂತ್ವವನ್ನು ನಿರ್ದೇಶಿಸಿಕೊಳ್ಳುತ್ತಿತ್ತು. ಗಾಂಧೀಜಿಯವರ ಕೈಯಲ್ಲಿ ಭಗವದ್ಗೀತೆ, ಇತರರ ಕೈಯಲ್ಲಿ ತುಲಸೀದಾಸ ರಾಮಾಯಣ. ಕಾಂಗ್ರೆಸ್ ಧ್ಯೇಯದಲ್ಲಿ ಅಭಿಮಾನವಿಟ್ಟಿದ್ದ ಅನೇಕ ಮುಸಲ್ಮಾನರು ಅದನ್ನು ಹಿಂದೂ ಮಹಾ ಸಭೆಯ ಒಂದು ಶಾಖೆಯೆಂದು ಕರೆಯಲಾರಂಭಿಸಿದರು.'

'ಈ ಗೊಂದಲವನ್ನು ಯಾರು ಪರಿಹರಿಸಬಹುದಾಗಿತ್ತು.'

'ಗಾಂಧೀಜಿ ಮತ್ತು ಜಿನ್ನಾ. ಗಾಂಧೀಜಿಯವರು ತಮ್ಮ ಹಿಂದೂ ಧರ್ಮಾಭಿಮಾನವನ್ನು ಕಾಂಗ್ರೆಸ್ ಒಳಗೆ ಬರಕೊಡಬಾರದಾಗಿತ್ತು. ಮತ್ತು ಜಿನ್ನಾ ಅವರಂತಹ ಚಾಣಾಕ್ಷ ರಾಜ್ಯಕುಶಲನನ್ನು ಹೊರಗಿಡಬಾರದಾಗಿತ್ತು. ಜಿನ್ನಾ ಅವರು ಒಮ್ಮೆ ಕಾಂಗ್ರೆಸ್ಸಿನ ಅಧ್ಯಕ್ಷರಾಗಿದ್ದರೆಂಬುದನ್ನು ನಾವು ಮರೆಯಲಾಗುವುದಿಲ್ಲ. ಅವರ ನೆರವನ್ನು ಗಾಂಧೀಜಿಯವರು ಕೋರದೆ ವಲ್ಲಭಭಾಯಿ ಪಟೇಲ್, ಕೆ. ಎಂ. ಮುನಿಷಿ, ಸಿ. ಆರ್. ಮೊದಲಾದವರನ್ನು ಬಿಗಿಯಾಗಿ ಅಪ್ಪಿದರು. ತಮ್ಮ ಪ್ರತಿಷ್ಠೆಗೆ ಧಕ್ಕೆ ತಗುಲಲು ಜಿನ್ನಾ ಸಾಹೇಬರು ಷೌಕತ್ ಅಲ್ಲಿಯವರ ಸ್ಥಾನಕ್ಕೆ ಬಂದು ಮುಸ್ಲಿಂ ಲೀಗಿನ ಅಧ್ವರ್ಯುಗಳಾದರು.'

'ಹಿಂದೂ-ಮುಸ್ಲಿಂ ಐಕಮತ್ಯದ ಪ್ರಶ್ನೆಯಲ್ಲಿ ಗಾಂಧೀಜಿಯವರು ಪರಾಜಿತರಾದರೆಂದು ನಿಮ್ಮ ಮತವೇ?'

'ನಿಸ್ಸಂದೇಹವಾಗಿ.'

'ಹಾಗಾದರೆ ಕಾಂಗ್ರೆಸ್ ಆ ವಿಚಾರದಲ್ಲಿ ಯಾವ ಧೋರಣೆಯನ್ನನುಸರಿಸಬೇಕಾಗಿತ್ತು?'

'ದಿವಂಗತ ಲಾಲಾ ಲಜಪತರಾಯರು ಈ ಪ್ರಶ್ನೆಯನ್ನು ಸೊಗಸಾಗಿ ಎದುರಿಸಿದ್ದಾರೆ. ಸಾಮಾನ್ಯ ಹಿಂದು ಹೇಡಿ, ಸಾಮಾನ್ಯ ಮುಸಲ್ಮಾನ ಬಾಯಾಳಿ. ಹಿಂದುಗಳಿಗೆ ಪೌರುಷ ಬಂದು ಅವರು ಮುಸಲ್ಮಾನರನ್ನು ಗಂಡೆದೆಯಿಂದ ಎದುರಿಸುವಂತಾದರೆ ಹಿಂದೂ-ಮುಸ್ಲಿಂ ಪ್ರಶ್ನೆ ತಾನೇ ತಾನಾಗಿ ನಿರ್ಣಯವಾಗುತ್ತದೆ. ಮುಸಲ್ಮಾನ ಭಗವದ್ಗೀತೆ, ಭಗವದ್ಭಕ್ತಿಗಳಿಗೆ ಮಣಿಯು ವುದಿಲ್ಲ. ಅವನು ಶಕ್ತಿಯ ಉಪಾಸಕ. ಶಕ್ತಿಯ ಸಾಧನದಿಂದಲೇ ಅವನನ್ನು ಎದುರಿಸಬೇಕು.'

'ಇದು ಕನಸಿನ ಗಂಟಾಯಿತು.'

'ಆಗಿಲ್ಲ. ಹಿಂದೂ ಮುಸ್ಲಿಮರಿಬ್ಬರೂ ಇಂದು ಬಾಲಕ್ಕೆ ಬಡಿದಾಡು ತ್ತಿದ್ದಾರೆ. ಹಿಂದುಗಳು ಪ್ರತಾಪಸಿಂಹ, ಶಿವಾಜಿಯವರ ಕನಸು ಕಂಡು ತಮ್ಮ ರಾಜ್ಯವನ್ನೇ ಪುನಃ ಸ್ಥಾಪಿಸುವ ದಿನವನ್ನು ಎದುರು ನೋಡುತ್ತಿದ್ದಾರೆ. ಸಾವರ್ಕರ್, ಮೂಂಜೆ, ಇವರ ಬಣ್ಣದ ಮಾತುಗಳಿಗೆ ಮರುಳಾಗುತ್ತಿದ್ದಾರೆ. ಮುಸಲ್ಮಾನರೂ ಅದೇ ರೀತಿಯ ಕನಸಿನ ಪ್ರಪಂಚದಲ್ಲಿ ವಿಹರಿಸುತ್ತಿದ್ದಾರೆ. ಇಬ್ಬರೂ ಕನಸಿನ ಭ್ರಾಮಕ ರಾಜ್ಯಗಳನ್ನು ಬಿಟ್ಟು ನಿಸರ್ಗ ಪ್ರಪಂಚಕ್ಕೆ ಬರಬೇಕು. ನಮ್ಮ ದೇಶಕ್ಕೆ ಮುಸ್ಲಿಮರು ಮೊದಲು ದರೋಡೆಕಾರ ರಾಗಿಯೇ ಬಂದರು ನಿಜ. ಆದರೆ ಅವರು ಅದರಲ್ಲಿ ತೃಪ್ತರಾಗಲಿಲ್ಲ. ರಾಜ್ಯ ಗಳನ್ನು ಕಟ್ಟಿದರು, ಬೆಳಸಿದರು, ತಾವೂ ಇಲ್ಲಿ ಬೇರೂರಿ ನಿಂತರು. ಹಿಂದೂ ಸ್ಥಾನವನ್ನೇ ತಮ್ಮ ಮಾತೃಭೂಮಿಯನ್ನಾಗಿ ಮಾಡಿಕೊಂಡರು. ದೆಲ್ಲಿ, ದಕ್ಕನ್, ಕರ್ನಾಟಕ, ಆಗ್ರಾಗಳಲ್ಲಿ ಅಭೂತಪೂರ್ವವಾದ ಸಾಂಸ್ಕೃತಿಕ ಸೌಧಗಳನ್ನು ಕಟ್ಟಿದರು. ಅವರಲ್ಲಿ ಬೇದಿಲ್, ಷಾ ಲತೀಫ್, ಗಾಲಿಬ್ ಮೊದಲಾದ ಮಹಾ ಕವಿಗಳು ಹುಟ್ಟಿಕೊಂಡರು. ದಾರಾಷೀಕೋನಂತಹ ಮಹಾಪುರುಷ ಹುಟ್ಟಿ ವೇದವೇದಾಂತಗಳನ್ನು ಫಾರ್ಸಿ ಅರಾಬಿ ಭಾಷೆಗಳಿಗೆ ಅನುವಾದ ಮಾಡಿದ. ಇಸ್ಲಾಂ ಸಂಸ್ಕೃತಿಯ ಮಿಳನದಿಂದ ಭಾರತೀಯ ಸಂಸ್ಕೃತಿಗೆ ಹೊಸ ಕಳೆ ಚೇತನಗಳು ಮೂಡಿದುವು. ಅವರನ್ನು ನಾವು ನಮ್ಮ ಸೋದರರೆಂದು ಭಾವಿಸಬೇಕಲ್ಲದೆ ಪರಕೀಯರೆಂದು ಭಾವಿಸಕೂಡದು. ಇದೇ ಭಾವನೆಯು ಅವರಲ್ಲಿಯೂ ಬೆಳೆದು ಬರಬೇಕು.'

, ಅವರು ಗೋಭಕ್ಷಕರಾಗಿರುವವರೆಗೆ ಇದು ಹೇಗೆ ಸಾಧ್ಯ?'

'ಹಿಂದುಗಳು ಗೋವಿಗೆ ಅನವಶ್ಯಕವಾದ ಮಹತ್ವ ಕೊಡುತ್ತಿದ್ದಾರೆಂದು ನನ್ನ ಮತ. ಕ್ಲಬ್ಬುಗಳಲ್ಲಿ, ಯೂರೋಪಿಯನ್ ರೆಸ್ಟುರಾಗಳಲ್ಲಿ ಹೋಗಿ ನೋಡಿ. ಎಷ್ಟು ಜನ ಸವರ್ಣ ಹಿಂದುಗಳು ಹಸುವಿನ ಮಾಂಸ ತಿನ್ನುವುದಿಲ್ಲ. ಗೋರಕ್ಷಣೆಗೆ ಬಂದಿರುವ ಧಾರ್ಮಿಕ ಸ್ವರೂಪವನ್ನು ಕಿತ್ತೊಗೆಯಬೇಕು.'

'ಗೋಹತ್ಯಕ್ಕೆ ನಿಮ್ಮ ಒಪ್ಪಿಗೆಯಿದೆಯೋ?'

'ಇಲ್ಲ. ಆರ್ಥಿಕ, ಆರೋಗ್ಯ ಹಾಗೂ ರಾಷ್ಟ್ರೀಯ ದೃಷ್ಟಿಯಿಂದ ಒಪ್ಪಿಗೆಯಿಲ್ಲ. ಗೋಬಲ ತಪ್ಪಿದರೆ ನಾವು ಕ್ಷಯರೋಗ ಪೀಡಿತರಾಗುತ್ತೇವೆ. ಹಾಲು ಹಿಂಡುವ ಹಸುಗಳನ್ನು ರಾಷ್ಟ್ರದಲ್ಲಿ ಕಾಪಾಡಬೇಕಾದದ್ದು ಹಿಂದೂ-ಮುಸ್ಲಿಮರಿಬ್ಬರ ಕರ್ತವ್ಯ. ಆದರೆ ಗೊಡ್ಡು ದನಗಳನ್ನು ಅವರು ತಿಂದುಕೊಳ್ಳಲಿ. ಅದರಿಂದಾಗುವ ನಷ್ಟವೇನು?'

'ನೀವು ಹೇಳುತ್ತಿರುವುದು ಹಿಂದೂ ಧರ್ಮಕ್ಕೇ ವಿರೋಧವಾಗಿದೆ.'

'ಅಂತಹ ಅತುಲ ಛಲ ಹಿಂದುಗಳದಾಗಿದ್ದರೆ ಅವರು ಸೋಮನಾಥ ಸುಲಿಗೆಯ ಕಾಲದಲ್ಲಿ ದೌರ್ಬಲ್ಯ ತೋರಿಸಿದುದೇಕೆ? ಪರದೇಶೀಯರೊಂದಿಗೆ ಅಲ್ಪ ಲಾಭಕ್ಕಾಗಿ ಸಂಧಾನ ಮಾಡಿ ದೇಶವನ್ನು ಅವರಿಗೆ ಪಸಾಯನ ದಾನ ಮಾಡಿದುದೇಕೆ? ಮಾಡಿದ್ದುಣ್ಣೋ ಮಾರಾಯ. ಮುಸಲ್ಮಾನರೂ ಈ ಬಗ್ಗೆ ಉದಾರ ಧೋರಣೆಯನ್ನು ತಳೆಯಬೇಕು. ಹಸುವಿನ ಹಾಲು ಹಿಂದೂ ಮಗುವಿಗೆ ಹೇಗೆ ಅವಶ್ಯಕವೋ ಹಾಗೇ ಮುಸ್ಲಿಮ ಮಗುವಿಗೂ ಅವಶ್ಯಕ. ದೇಶದ ಭವಿಷತ್ತಿನ ದೃಷ್ಟಿಯಿಂದ ಹಟಮಾರಿತನವನ್ನು ಅವರೂ ಬಿಡಬೇಕು.'

'ಗೋಹತ್ಯೆ ಅವರಿಗೆ ಧರ್ಮವೆಂತಲ್ಲ.'

'ಮೌಲ್ವಿ ಮುಲ್ಲಾಗಳ ಧರ್ಮ. ನಮ್ಮ ಶಾಸ್ತ್ರಿಗಳು, ಪಂಡಿತರು ಹೇಗೆ ವೇದ ಧರ್ಮವನ್ನು ಅಪಾರ್ಥ ಮಾಡಿ ಜಗತ್ತಿನಲ್ಲಿ ಅಜ್ಞಾನ ಪರಂಪರೆಯನ್ನು ಬೆಳೆಸಿದ್ದಾರೆಯೋ, ಹಾಗೆ ಅವರ ಮುಲ್ಲಾ ಮೌಲ್ವಿಗಳೂ ಬೆಳೆಸಿದ್ದಾರೆ. ಹಜರತ್ ಪೈಗಂಬರರು ಯಾವ ಆಹಾರವೂ ಸಿಕ್ಕದಿದ್ದರೆ ಹಸು,

ಒಂಟೆಗಳನ್ನು ತಿನ್ನಬಹುದೆಂದು ಹೇಳಿದ್ದಾರೆ. ಅವರು ಹೇಳಿದ್ದು ಅರೇಬಿಯಾ ದಂತಹ ಮರುಭೂಮಿಗೆ ಅನ್ವಯಿಸಿ ಹೇಳಿದ ಮಾತು. ಪ್ರಕೃತಿಶ್ರೀಯ ಆಡುಂಬೊಲವಾಗಿರುವ ಭರತಖಂಡಕ್ಕೆ ಅವರೇ ಈ ಮಾತನ್ನು ಅನ್ವಯಿಸು ವುದಿಲ್ಲ. ಮುಸ್ಲಿಮರಿಗೆ ಮೂರು ಮುಖ್ಯ ಆಧಾರಗಳು. ಮೊದಲನೆಯದಾಗಿ ಕೊರಾನ್, ಅದರಲ್ಲಿ ಸಮಾಧಾನ ಸಿಕ್ಕದಿದ್ದರೆ ಹಡೀಸ್, ಅದರಲ್ಲಿಯೂ ಸಮಾಧಾನ ಸಿಕ್ಕದಿದ್ದರೆ ಮನುಷ್ಯನ ವಿಚಾರವಾಣಿ. ವಿಚಾರಕ್ಕೆ ಹಜರತ್ ರವರು ತುಂಬ ಮಹತ್ವ ಕೊಟ್ಟಿದ್ದಾರೆ ಮುಸಲ್ಮಾನ ಬಂಧುಗಳು ವಿಚಾರ ಪರವಶರಾದರೆ ಹಿಂದುಗಳ ಬಯಕೆ ತಮ್ಮ ಧರ್ಮಕ್ಕೆ ವಿರೋಧವಾದುದಲ್ಲವೆಂದು ಗ್ರಹಿಸಲು ಶಕ್ಯವಿದೆ.'

'ಅವರ ಮಸೀದಿಗಳ ಮುಂದೆ ವಾದ್ಯವಾದನಮಾಡುವ ಸಮಸ್ಯೆಯೋ?'

'ಅದು ಅಷ್ಟು ದೊಡ್ಡ ವಿಷಯವಲ್ಲ. ಗೋಹತ್ಯನಿರೋಧಕ್ಕೆ ಮುಸಲ್ಮಾನರು ಒಪ್ಪಿದರೆ ಈ ಆಕಾಂಕ್ಷೆಯನ್ನು ಹಿಂದುಗಳು ಪೂರೈಸ ಬಹುದು—ದೇಶಕ್ಕಾಗಿ—ಶಾಂತಿಗಾಗಿ ಪೂರೈಸಬೇಕು.'

'ಇಷ್ಟು ಕ್ಷುಲ್ಲಕ ವಿಷಯಗಳಿಗೆ ಈ ಎರಡು ಜನಾಂಗಗಳೂ ಹೋರಾಡು ತ್ತಿರುವುದು ನನಗೆ ಬಹಳ ಲಜ್ಜಾಸ್ಪದವೆನಿಸುತ್ತದೆ.'

'ನನಗೂ ಅನ್ನಿಸುತ್ತದೆ. ಸೂತ್ರಗಳ ಚಾಲನೆ ಯಾರ ಕಯ್ಯಲ್ಲಿದೆ ನೋಡಿ. ಕಡಲಾಚೆಯಿಂದ ಬಂದ ಶ್ವೇತರ ಕೈವಾಡ ಪ್ರತಿಯೊಂದು ಹಿಂದೂ-ಮುಸಲ್ಮಾನ ಜಗಳದ ಹಿಂದೆಯೂ ಇದ್ದೇ ಇದೆ. 'ನೀವು ಒಂದಾಗಿ. ನಾವು ನಿಮ್ಮನ್ನು ಮಾನಿಸುತ್ತೇವೆ' ಎಂದು ಅವರು ಬಾಯಲ್ಲಿ ಹೇಳುತ್ತಾರೆ. ಕಾರ್ಯರಂಗದಲ್ಲಿ ಹಿಂದೂ-ಮುಸ್ಲಿಮರು ಪರಸ್ಪರ ಗಂಟಲು ಹಿರಿಯುವುದಕ್ಕೆ ಬೇಕಾದ ಸಲಕರಣೆ, ಸೌಕರ್ಯಗಳನ್ನು ಒದಗಿಸಿಕೊಡುತ್ತಾರೆ. ಹಿಂದೂ ಮುಸ್ಲಿಮ ಸಮಸ್ಯೆಗಿಂತಲೂ ಪ್ರಬಲವಾದ ಕೂಲಿಗಾರ ಬಂಡವಾಳಗಾರ ಸಮಸ್ಯೆ ಇಂಗ್ಲೆಂಡಿನಲ್ಲಿದೆ. ಅದು ಅವರ ರಾಷ್ಟ್ರೀಯತೆಗೆ ವಿಘಾತವಾಗಿಲ್ಲ. ಧರ್ಮರಾಯ ಹೇಳಿದ ಹಾಗೆ— ನಮ್ಮ ನಮ್ಮಲ್ಲಿ ನಾವು ಐವರು, ಅವರು ನೂರೆಂಟು; ಮೂರನೆಯವರು ಬಂದರೆ ನಾವು ನೂರ ಹದಿಮೂರು. ಇಂಗ್ಲೆಂಡ್ ಇವತ್ತು ಪ್ರಬಲ ರಾಷ್ಟ್ರವಾಗಿರುವುದು ಈ ಜ್ಞಾನದಿಂದ. ಹಿಂದೂ-ಮುಸ್ಲಿಮರು ಎಂದು ಈ ತತ್ವವನ್ನು ಅರ್ಥ ಮಾಡಿಕೊಳ್ಳುವರೋ

ಅಂದು ಹಿಂದೂಸ್ಥಾನವನ್ನು ಮುಟ್ಟುವ ಎದೆಗಾರಿಕೆ ಯಾರಲ್ಲಿಯೂ ಬರುವುದಿಲ್ಲ. ಎಲ್ಲರ ನಿರ್ದಿಷ್ಟ ಗುರಿಯಾಗಿರುವ 'ಸ್ವಾತಂತ್ರ್ಯ'ವನ್ನು ಹಿಂದೂ-ಮುಸ್ಲಿಮರು ಏಕ ಕಂಠ, ಏಕ ಸಂಕಲ್ಪರಾಗಿ ಸಾಧಿಸಬೇಕು. ಒಳ ಜಗಳ, ಸಣ್ಣ ಪುಟ್ಟ ಸಮಸ್ಯೆಗಳನ್ನು ನಾವು ಸ್ವತಂತ್ರ ಹಿಂದೂಸ್ಥಾನದಲ್ಲಿ ಪರಿಹರಿಸಿಕೊಳ್ಳೋಣ. ಇದಕ್ಕೆ ಮೂರನೆಯವರ ಮಧ್ಯಸ್ಥಿಕೆ ಬೇಕಿಲ್ಲ.'

'ಇದರ ಪರಿಹಾರಕ್ಕೆ ನಿಮ್ಮ ಉಪಾಯವೇನು?'

'ಗಾಂಧೀ-ಜಿನ್ನರ ಸಖ್ಯ. ಗಾಂಧೀಜಿಯವರು ಗೀತೆ, ರಾಮಾಯಣಗಳನ್ನು ಬದಿಗಿಡಬೇಕು-ಸಂಕುಚಿತ ಮನಸ್ಕ ಪರಿವಾರವನ್ನು ದೂರ ಮಾಡಿಕೊಳ್ಳಬೇಕು. ಮುಸ್ಲಿಮ ಲೀಗಿನೊಂದಿಗೆ ಸಂಧಾನ ನಡೆಸಿ ಜಿನ್ನಾರವರೊಂದಿಗೆ ಒಪ್ಪಂದ ಮಾಡಿಕೊಳ್ಳಬೇಕು. ಜಿನ್ನಾ ಸಾಹೇಬರು ಪಾಕಿಸ್ತಾನ ಭೂತವನ್ನು ತಮ್ಮ ಮನಸ್ಸಿನಿಂದ ಹೊರಡಿಸಬೇಕು.'

'ಇದು ಸಾಧ್ಯವೇ?'

'ಸಾಧ್ಯ. ದೂರದರ್ಶಿಗಳಾದ ಮಹಾತ್ಮಾಜೀಯವರು ಜಿನ್ನಾ ಅವರಿಗೆ ಪತ್ರ ಕೂಡ ಬರೆದಿದ್ದಾರೆ. ಆದರೆ ಸಾಮ್ರಾಜ್ಯ ಸರ್ಕಾರದ ಪ್ರಭಾವದಿಂದ ಅದು ಜಿನ್ನಾ ಅವರ ಕೈಸೇರಲಿಲ್ಲ.'

'ಜನತೆ ಏನು ಮಾಡಬೇಕು?'

'ಪರಸ್ಪರ ಅರ್ಥ ಮಾಡಿಕೊಳ್ಳುವ ಪ್ರಯತ್ನ ಮಾಡಬೇಕು. ಸೂಫಿ ಸಂಘಗಳನ್ನು ಸ್ಥಾಪಿಸಿ ಹಿಂದೂ - ಮುಸ್ಲಿಮರ ಐಕಮತ್ಯದ ಪ್ರವಾದಿಗಳಾದ ಕಬೀರ್, ದಾರಾ, ರಾಮಕೃಷ್ಣ ಪರಮಹಂಸ ಮೊದಲಾದ ಮಹಾ ಪುರುಷರ ಅಮೃತಾದರ್ಶವನ್ನು ಅನುಸರಿಸಬೇಕು. ಮತ್ತು ಸಾರ್ವತ್ರಿಕವಾಗಿ ಮುಸ್ಲಿಮರಲ್ಲಿ ವಿದ್ಯಾಪ್ರಸಾರವಾಗಿ ಅವರಲ್ಲಿರುವ ಅಂಧತೆಯನ್ನು ಹೋಗಲಾಡಿಸಲೆತ್ನಿಸಬೇಕು. ಬೆಳಕು ಬರುವ ತನಕವೇ ಕತ್ತಲೆ ಮೂಡಿರುವುದು ಎಂಬುದನ್ನು ಮರೆಯಬಾರದು.'

ಮರೆಯುವುದು ಸಾಧ್ಯವೂ ಇಲ್ಲ. ರಾಯರ ಮಾತಿನಲ್ಲಿ ಸತ್ಯದ ನಿಷ್ಠುರ ತೀಕ್ಷ್ಣತೆಯಿತ್ತು. ಅವರನ್ನು ಅಭಿವಂದಿಸಿ ನಾನು ಮರಳಿದೆ.

---::---

# ಕೋಮುವಾರು ಭೂತ

ನಾನು ಕೃಷ್ಣರಾಯರನ್ನು ಕಾಣಲು ಹೋದಾಗ ಅವರು ತಮ್ಮ ಕಾಂಪೌಂಡಿನಲ್ಲಿ ತಲೆಯೆತ್ತಿ ನಿಂತಿದ್ದ ಕಲ್ಲಿನ ಚೂರುಗಳನ್ನು ಕೀಳುವ ಕೆಲಸದಲ್ಲಿದ್ದರು ನನ್ನನ್ನು ಕಂಡು

'ಬನ್ನಿ, ಯಾವಾಗ ಬಂದಿರಿ?'

'ಸ್ವಲ್ಪ ಹೊತ್ತಾಯಿತು.'

'ನಾನು ನೋಡಲಿಲ್ಲ, ಕ್ಷಮಿಸಿ.'

'ಏನೋ ಕೆಲಸದಲ್ಲಿ ತೊಡಗಿದಂತಿದೆ?'

'ಹೌದು. ದೊಡ್ಡ ಕೆಲಸ. ಮಕ್ಕಳು ಮೈಮರೆತು ಆಡುತ್ತಿರುತ್ತಾರೆ. ಅವರ ಕಾಲಿಗೆ ಕಲ್ಲುಗಳು ನೆಟ್ಟಾವೆಂದು ಕೀಳುತ್ತಿದ್ದೇನೆ.'

'ಸಂದೇಹವೇನು ದೊಡ್ಡ ಕೆಲಸವೇ!'

'ಬನ್ನಿ, ಒಳಗೆ ಕೂಡೋಣ.'

ಒಳಗೆ ಕುಳಿತೆವು. ರಾಯರು ಸಿಗರೇಟ್ ಹಚ್ಚಿದರು.

'ಕಲ್ಲುಗಳು ನಮ್ಮ ಕಾಲಿಗೆ ನೆಡುವ ತನಕ ಅವುಗಳು ಇರುವನ್ನೇ ನಾವು ಲಕ್ಷಿಸುವುದಿಲ್ಲ ಅಲ್ಲವೇ?'

'ಹೌದು. ಸ್ವಂತ ಅನುಭವದಿಂದ ನೀವು ಈ ಶುದ್ಧೀಕರಣಕ್ಕೆ ಕೈ ಹಾಕಿರುವ ಹಾಗೆ ಕಾಣುತ್ತದೆ.'

'ನಿಸ್ಸಂದೇಹವಾಗಿ. ಜನಜೀವನದ ಸುಹಾದಿಯಲ್ಲಿ ತಲೆಯೆತ್ತಿ ನಿಲ್ಲುವ ಕಲ್ಲುಗಳನ್ನು ನಾವು ಕೀಳುತ್ತ ಬರಬೇಕು.'

'ಇದನ್ನು ಯಾವುವಕ್ಕೆ ಅನ್ವಯಿಸುತ್ತೀರಿ?'

'ನಮ್ಮ ನಾಡಿನಲ್ಲಿ ಕಳ್ಳಿಯ ಬೇಲಿಯ ಹಾಗೆ ಬೆಳೆದಿರುವ ಕೋಮುವಾರು ಭೂತಕ್ಕೆ.'

'ಅದು ಭೂತವೇ ಆಗಿದೆ ನಿಜ.'

'ಆ ಭೂತಕ್ಕೆ ಎರಡು ಮುಖ; ಒಂದು ಸಮಾಜ, ಎರಡು ಸ್ವಾರ್ಥ.'

'ಹಾಗೆಂದರೆ ?'

'ನಾನು ಒಂದು ಜಾತಿಯಲ್ಲಿ, ಒಂದು ಸಮಾಜದಲ್ಲಿ ಹುಟ್ಟಿರುತ್ತೇನೆ. ಅದು ಮುಂದಕ್ಕೆ ಬರಬೇಕು ಎಂದು ಬಯಸುತ್ತೇನೆ. ಅದಕ್ಕಾಗಿ ದುಡಿಯುತ್ತೇನೆ. ಇದೂ ಕೋಮುವಾರು ಭಾವನೆಯ ಒಂದು ರೂಪವೇ. ಒಂದೊಂದು ವೇಳೆ ತನ್ನ ಸಮಾಜಕ್ಕೇ ದುಡಿಯುವವನಿಗೆ ಬೇರೆ ಸಮಾಜಗಳ ಕಷ್ಟ ನಷ್ಟಗಳ ಅರಿವಾಗುವುದಿಲ್ಲ. ಅವನ ಕಟುಧರ್ಮದಿಂದ ಬೇರೆ ಸಮಾಜಗಳಿಗೆ ತೊಂದರೆಯೂ ಆಗುತ್ತದೆ. ಆದರೂ ಅವನ ದೃಷ್ಟಿ ಕ್ಷಮ್ಯ. ಹತ್ತು ಜನರ ಹಿತಕ್ಕಾದರೂ ಅವನ ಮನಸ್ಸು ಮೊರೆಯುತ್ತದೆ. ಡಾ|| ಅಂಬೇಡ್ಕರ್, ಜಿನ್ನಾ, ಇ. ವಿ. ರಾಮಸ್ವಾಮಿ ನಾಯ್ಕರ್ ಇವರು ಈ ಗುಂಪಿಗೆ ಸೇರಿದವರು.'

'ಅವರ ದೃಷ್ಟಿಯೂ ತಪ್ಪಲ್ಲವೇ?'

'ವಿಶಾಲ ದೃಷ್ಟಿಯಿಂದ ತಪ್ಪು. ಪ್ರತಿಯೊಂದು ಸಮಾಜವೂ ಒಂದೊಂದು ಮಂಡೂಕ ಕೂಪವನ್ನು ನಿರ್ಮಾಣ ಮಾಡಿಕೊಂಡರೆ ವಿಶಾಲ ಭಾರತವನ್ನು ಕಟ್ಟುವವರು ಯಾರು? ಆದರೆ ಎಲ್ಲೆಲ್ಲೂ ವಿಶಾಲ ಭಾರತದ ಕನಸಿಗೆ ಬಿದ್ದು ತಮ್ಮ ನಿತ್ಯಜೀವನದ ಕರ್ತವ್ಯವನ್ನು ಬಿಡಲೂ ಬಾರದು. ಗಾಂಧೀಜಿಯವರು ಅಖಿಲ ಭಾರತ ವ್ಯಕ್ತಿ. ಜಗತ್ತಿನ ಮಹಾ ವ್ಯಕ್ತಿ. ಆದರೆ ಅವರು ಗುಜರಾತಿಗಳ ಹಿತವನ್ನು ಮರೆತಿಲ್ಲ. ಸುಮುಖವಾದ ಕೋಮುವಾರು ಭಾವನೆಯನ್ನೇ ಸಮಾಜ ಜಾಗೃತಿ ಎಂದು ಕರೆಯಬಹುದು. ವೀರಶೈವರು, ಒಕ್ಕಲಿಗರು, ಶ್ರೀ ವೈಷ್ಣವರು, ವೈಶ್ಯರು ತಮ್ಮ ವಿದ್ಯಾರ್ಥಿಗಳ ಸಲುವಾಗಿ ಪ್ರಸಾದನಿಲಯಗಳನ್ನು ನಡೆಸುತ್ತಿದ್ದಾರೆ. ಅವರವರು ಅವರವರ ಸಮಾಜದಲ್ಲಿ ಇಂತಹ ಉತ್ತಮ ಕೆಲಸ ಮಾಡುತ್ತ ಹೋದರೆ ದೇಶದ ಅನೇಕ ಸಮಸ್ಯೆಗಳು ಪರಿಹಾರವಾಗುತ್ತವೆ. ಆದರೆ ಬೇರೆ ಸಮಾಜವನ್ನು ಮೆಟ್ಟಿ- ತುಳಿದು - ಪಾತಾಳಕ್ಕೆ ನೂಕಿ ಅದರ ತಲೆಯ ಮೇಲೆ ತಾನು ಲಾಸ್ಯವಾಡುತ್ತೇನೆಂದು ಹೊರಡುವ ಸಮಾಜ, ವ್ಯಕ್ತಿಯನ್ನೇ 'ನಾನು ಕೋಮುವಾರು ಭೂತ ಎಂದು

ಕರೆಯುವುದು.'

'ಈಗಿನ ಸರ್ಕಾರದ ಧೋರಣೆಯಿಂದ ಬ್ರಾಹ್ಮಣೇತರರ ಪ್ರಾಬಲ್ಯ ಹೆಚ್ಚಿ ಬ್ರಾಹ್ಮಣರಿಗೆ ಕಾಲೇಜು, ಶಾಲೆ, ಸರ್ಕಾರಗಳಲ್ಲಿ ಎಡೆಯಿಲ್ಲದಂತಾಗಿದೆ ಎನ್ನುವ ಕೂಗಿಗೆ ಏನು ಹೇಳುತ್ತೀರಿ.'

'ಎಲ್ಲ ಕೋಮುಗಳಿಗೆ ಸಮಾನಾವಕಾಶ ಕೊಡಬೇಕೆಂದು ಸರ್ಕಾರದವರು ಈ ನೀತಿಯನ್ನನುಸರಿಸುತ್ತಿದ್ದಾರೆ ನಿಜ. ಆದರೆ ನಿಮ್ಮನ್ನು ನಾನು ಒಂದು ಪ್ರಶ್ನೆ ಕೇಳುತ್ತೇನೆ. ಬ್ರಾಹ್ಮಣರು ಅಸಮಾಧಾನಗೊಂಡಿದ್ದಾರೆ ಎಂದು ಹೇಳಿದಿರಿ, ಈಗ ಬ್ರಾಹ್ಮಣರು ಇದ್ದಾರೇನು?'

'ಇದ್ದಾರೆ. ವೈದಿಕ ಧರ್ಮವನ್ನನುಸರಿಸುವವರು.'

'ಗಂಧಾಕ್ಷತೆ, ಮೂರು ನಾಮ, ದ್ವಾದಶ ಮುದ್ರೆಗಳನ್ನು ಹಾಕಿಕೊಂಡರೆ ಬ್ರಾಹ್ಮಣರಾಗುವುದಿಲ್ಲ. ನಾಟಕದಲ್ಲಿ ಬ್ರಾಹ್ಮಣ ಪಾತ್ರ ವಹಿಸುವವರು ಹೇಗೆ ಬ್ರಾಹ್ಮಣರಲ್ಲವೋ ಹಾಗೆ ಜೀವನ ನಾಟಕದಲ್ಲಿ ಪಾತ್ರ ವಹಿಸುತ್ತಿರುವ ಇವರೂ ಬ್ರಾಹ್ಮಣರಲ್ಲ.'

'ಹಾಗಾದರೆ ಇವರು ಯಾವ ಜಾತಿ?'

'ವೈಶ್ಯ ಜಾತಿ. ಇವತ್ತು ಎಲ್ಲರ ಧರ್ಮವೂ ವೈಶ್ಯ ಧರ್ಮವೇ. ಹಣ ಸಂಗ್ರಹ—ಹಣ-ಹಣ! ಬ್ರಾಹ್ಮಣನಾಗಲಿ ಶೂದ್ರನಾಗಲಿ ಹಣವನ್ನು ಬಿಟ್ಟು ಬೇರೆ ಏನಾದರೂ ಯೋಚಿಸುತ್ತಾನೆಯೇ ಹೇಳಿ. ನಿಜವಾದ ಬ್ರಾಹ್ಮಣನನ್ನು ಯಾವ ಸರ್ಕಾರವೂ ಅಲುಗಾಡಿಸಲಾರದು. ಅವನು ಹುಟ್ಟಿನಿಂದ ಬ್ರಾಹ್ಮಣ ಎನಿಸಿಕೊಳ್ಳುವುದಿಲ್ಲ. ತನ್ನ ವೃತ್ತಿ, ಪ್ರವೃತ್ತಿಗಳಿಂದ.'

'ಅಂತಹ ಬ್ರಾಹ್ಮಣರು ಯಾರು?'

'ಗಾಂಧಿ, ಆಜಾದ್, ನೆಹ್ರೂ, ಮಾಳವೀಯ ನಿಜವಾದ ಬ್ರಾಹ್ಮಣರು. ಇಂದಿನ ಹಿಂದೂಸ್ಥಾನದಲ್ಲಿ ಅವರು ಬೆರಳೆಣಿಕೆಯನ್ನೂ ಪೂರೈಸುವುದಿಲ್ಲ.'

'ಆಗಲಿ. ನಿಮ್ಮ ವಾದವನ್ನು ಒಪ್ಪಿದರೂ ಈ ಬ್ರಾಹ್ಮಣರೆನಿಸಿಕೊಂಡಿರುವವರಿಗೆ ಆಗುತ್ತಿರುವ ಅನ್ಯಾಯಕ್ಕೆ ಏನು ಹೇಳುವಿರಿ?'

'ಸರ್ಕಾರಿ ಅಧಿಕಾರ, ಕಾಲೇಜು ವ್ಯಾಸಂಗ ಅವರ ಆಜನ್ಮಸಿದ್ಧ ಹಕ್ಕೇನು? ಅವುಗಳನ್ನು ಆಕ್ರಮಿಸಿಕೊಂಡು ಇವರು ಹಲವಾರು ವರ್ಷ ಮೆರೆ

ದರು. ಇತರರು ತಿಳಿಯಿತ್ತದಂತೆ ತಮ್ಮ ಮಕ್ಕಳು ಮೊಮ್ಮಕ್ಕಳನ್ನು ತಂದು ತುಂಬಿದರು. ಈಗ ಬೇರೆಯವರ ಸರದಿ. ಅವರೂ ನಾಲ್ಕು ದಿವಸ ಅನುಭವಿಸಲಿ. ಜೀವನೋಪಾಯಕ್ಕೆ ಸರ್ಕಾರಿ ಸೇವೆಯೇ ಮಾರ್ಗ ಎಂದು ಭಾವಿಸುವುದು ನಮ್ಮ ನೈತಿಕ ದಿವಾಳಿಯನ್ನು ಸಾರುತ್ತದೆ. ವ್ಯಾಪಾರ, ಕೃಷಿ, ಲಲಿತಕಲೆ, ಕೈಗಾರಿಕೆಗಳಲ್ಲಿ ಆಗಬೇಕಾದ ಕೆಲಸ ಅಖಂಡವಾಗಿ ಉಳಿದಿದೆ. ಆ ಕಡೆಗೆ ನಮ್ಮ ಜನಗಳ ಲಕ್ಷ್ಯ ಹೊರಳಲಿ.'

'ಸರಕಾರಿ ಅಧಿಕಾರಕ್ಕೆ ನೀವು ಹೆಚ್ಚು ಬೆಲೆ ಕೊಡುವುದಿಲ್ಲವೇ?'

'ಏನೂ ಕೊಡುವುದಿಲ್ಲ. ಅದೊಂದು ಹೀನ ದಾಸ್ಯ. ಅಸ್ವತಂತ್ರ ಹಿಂದೂಸ್ಥಾನದಲ್ಲಿಯೇ ಅದಕ್ಕೆ ಇಲ್ಲದ ಸಲ್ಲದ ಪುರಸ್ಕಾರ. ಸ್ವತಂತ್ರ ರಾಷ್ಟ್ರಗಳಲ್ಲಿ ಸರ್ಕಾರಿ ಅಧಿಕಾರಿ ಪ್ರಜೆಗಳ ದೀನ ಸೇವಕ. ಹಿಂದೂಸ್ಥಾನದಲ್ಲಿ ಪ್ರತಿಯೊಬ್ಬ ಪೋಲೀಸ್ ಕನಿಷ್ಠಬಿಲ್ಲೆಯೂ ಒಬ್ಬ ಹಿಟ್ಲರ್. ಸ್ವತಂತ್ರ ಜೀವನದಿಂದ ಒಪ್ಪತ್ತು ಉಂಡರೂ ಆಗುವ ಆನಂದ ಸರ್ಕಾರಿ ಮಂತ್ರಿ ಮಾಂಡಲಿಕರಿಗೂ ದೊರೆಯುವುದಿಲ್ಲ. ಅದೂ ಪರಾಕ್ರಾಂತವಾದ ಸರ್ಕಾರದ ಸೇವೆಯಲ್ಲಿ. ಈ ದಾಸ್ಯ ಶೃಂಖಲೆ ಕಳಚಿತಲ್ಲಾ ಎಂದು ಬ್ರಾಹ್ಮಣರೆನಿಸಿಕೊಂಡಿರುವವರು ಹಿಗ್ಗುವುದನ್ನು ಬಿಟ್ಟು ದುಃಖಿಸುವುದನ್ನು ಕಂಡು ನನಗೆ ನಾಚಿಕೆಯಾಗುತ್ತದೆ.'

'ಬ್ರಾಹ್ಮಣೇತರರು ನುಗ್ಗುತ್ತಿದ್ದಾರಲ್ಲಾ, ಅದು ನಿಮಗೆ ಹಿತಕರವಾಗಿದೆಯೇ?'

'ಅವರದೂ ಮೌಢ್ಯವೇ! ವಂಶ ಪಾರಂಪರ್ಯವಾಗಿ ಬಂದ ವೃತ್ತಿಗಳನ್ನು ಬಿಟ್ಟು, ಸುಖವಾಗಿ ಸ್ವತಂತ್ರವಾಗಿ ಇರುವ ಬಾಳುವೆಯನ್ನು ಧಿಕ್ಕರಿಸಿ ಸೇವಾವೃತ್ತಿಗೆ ಧುಮುಕುತ್ತಿರುವ ಅವರಿಗೂ ಅದರ ಕಹಿ ಕಾಲಾನುಕಾಲಕ್ಕೆ ಗೊತ್ತಾಗುತ್ತದೆ. ಇಂದು ಬ್ರಾಹ್ಮಣರಿಗೆ ಸಿಕ್ಕಿರುವ ತ್ರಿಶಂಕುಸ್ವರ್ಗವೇ ನಾಳೆ ಅವರಿಗೆ ಕಟ್ಟಿಟ್ಟ ಬುತ್ತಿ.'

'ನಿಮ್ಮ ಸಲಹೆಯಂತೆ ಯಾರೂ ಸರ್ಕಾರಿ ಸೇವೆಗೆ ಹೋಗದಿದ್ದರೆ ಹಿಂದೂಸ್ಥಾನದ ಕಲಿತ ತರುಣರ ಜೀವನೋಪಾಯ ಸಾಗುವುದು ಹೇಗೆ?'

'ಈಗ ನಡೆಯುತ್ತಿರುವ ಘೋರ ಯುದ್ಧಕ್ಕೆ ಮುಂಚೆ ಇದ್ದ ಸ್ಥಿತಿಯನ್ನೂ

ಈಗಿನ ಸ್ಥಿತಿಯನ್ನೂ ಸ್ವಲ್ಪ ತುಲನೆಮಾಡಿ ನೋಡಿ. ಮೊದಲು ವಿದ್ಯಾವಂತರಿಗೆ ಹೋಟೆಲು, ಸಿನೆಮಾ, ಕಛೇರಿಯಿಂದ ಕಛೇರಿ ಇವುಗಳನ್ನು ಬಿಟ್ಟರೆ ಬೇರೆ ನೆಲೆಯಿರಲಿಲ್ಲ. ಯುದ್ಧ ಬಂದು ನಿರುದ್ಯೋಗವನ್ನು ನಿವಾರಿಸಿದೆ.'

'ಏತರಿಂದ?'

'ಅನೇಕ ಕೈಗಾರಿಕೆಗಳು ಬೆಳೆದವು. ಯುದ್ಧಕ್ಕಾಗಿ ಸಾವಿರಾರು ಕುಶಲರು ಬೇಕಾದರು. ಜನಕ್ಕಿಂತ ಕೆಲಸಗಳೇ ಹೆಚ್ಚಾಯಿತು. ಆದರೆ ನಾಳೆ— ಯುದ್ಧಾನಂತರ ಪ್ರತಿಯೊಂದು ರಾಷ್ಟ್ರವೂ ಎದುರಿಸಬೇಕಾದ ದೊಡ್ಡ ಸಮಸ್ಯೆ ನಿರುದ್ಯೋಗದ ಪ್ರಶ್ನೆ. ಯುದ್ಧಕೆಲಸಕ್ಕಾಗಿ ತೆಗೆದುಕೊಂಡವರು ನಾಳೆ ನಿರಾಶ್ರಿತರಾಗುತ್ತಾರೆ. ಅವರ ಗತಿಯೇನು? ಅದಕ್ಕೆ ಈಗಲೇ ನಮ್ಮ ಜನ ಸಿದ್ಧತೆಗಳನ್ನು ಮಾಡಿಕೊಂಡಿರಬೇಕು. ಹೊಸ ಕೈಗಾರಿಕೆಗಳನ್ನು ಬೆಳೆಸ ಬೇಕು. 'Industrialise or Perish' ಎಂದು ಸರ್ ವಿಶ್ವೇಶ್ವರಯ್ಯ ನವರು ಹೇಳಿದ ಧೀರವಾಣಿ ನಮ್ಮ ಜನತೆಯ ಹೃದಯದಲ್ಲಿ ಸುವರ್ಣಾಕ್ಷರ ಗಳಿಂದ ಉಲ್ಲಿಖಿತವಾಗಬೇಕು. ಕೃಷಿ—ಕೈಗಾರಿಕೆ ಇವೆರಡೇ ನಮ್ಮ ಹಾಸು ಹೊಕ್ಕುಗಳು. ಇವುಗಳನ್ನು ದುರ್ಲಕ್ಷಿಸುವ ಯಾವ ಸಮಾಜವೂ ನಾಳಿನ ಭಾರತದಲ್ಲಿ ಬದುಕಲಾರದು.'

'ಕೃಷಿ ಕೈಗಾರಿಕೆಗಳಲ್ಲಿ ಎಷ್ಟೋ ಜನರ ಮನಸ್ಸು ಹೋಗುವುದಿಲ್ಲ. ಅವರೇನು ಮಾಡಬೇಕು?'

'ವ್ಯಾಪಾರ ಮಾಡಲಿ. ನಮ್ಮ ದೇಶದ ಹಂಚುವ ಕೆಲಸವನ್ನು ನಮ್ಮವರೇ ಕೈಯ್ಯಲ್ಲಿಟ್ಟುಕೊಳ್ಳಬೇಕು. ಈಗ ನೋಡಿ ಇಪ್ಪತ್ತು ವರ್ಷಗಳ ಕೆಳಗೆ ಬೆಂಗಳೂರಿನ ವ್ಯಾಪಾರವೆಲ್ಲಾ ವೈಶ್ಯರು, ವೀರಶೈವರ ಕೈಯ್ಯಲ್ಲಿತ್ತು. ಇಂದು ಅದು ಗುಜರಾತಿ, ಮುಲ್ತಾನಿ, ಮಾರವಾಡೀ ಲಬ್ಬೆ ಇವರ ಕೈಗೆ ಹೋಗಿದೆ. ಕರ್ನಾಟಕದ ಇತರ ಕಡೆಗಳಲ್ಲಿಯೂ ಹಾಗೆಯೇ. ಗದಗು, ಇಳಕಲ್ಲು, ಗುಳೇದಗುಡ್ಡಗಳಲ್ಲಿ ಮಾರವಾಡಿಗಳ ಪ್ರಾಬಲ್ಯ ಮಿತಿ ಮೀರಿವೆ. ದಕ್ಷಿಣ ಕನ್ನಡ ಜಿಲ್ಲೆಯ ವ್ಯಾಪಾರ ಮಲಬಾರಿಗಳ ಕೈಗೆ ಬೀಳುತ್ತಿದೆ. ಉತ್ತರ ಕರ್ನಾಟಕದಲ್ಲಿ ವ್ಯಾಪಾರ ಗುಜರಾತಿಗಳ ಸೊತ್ತಾಗುತ್ತಿದೆ. ಈ ಹೊಸ್ಸಿನ ಸುಳಿಯನ್ನು ನಿಲ್ಲಿಸುವುದು ನಮ್ಮವರ ಕರ್ತವ್ಯವಲ್ಲವೇ?'

'ನಿಜ ಇದಕ್ಕೆ ಕಾರಣವೇನು ?'

'ನಮ್ಮ ಜನರಲ್ಲಿ ವಿಷ ವಾಯುವಿನಂತೆ ಹರಡಿರುವ ಕೋಮುವಾರು ಭಾವನೆ. ಬ್ರಾಹ್ಮಣರು ಮುಂದಕ್ಕೆ ಬಂದರೆ ಬ್ರಾಹ್ಮಣೇತರರಿಗೆ ಸಹನೆಯಿಲ್ಲ; ಬ್ರಾಹ್ಮಣೇತರರು ಮುಂದಕ್ಕೆ ಬಂದರೆ ಬ್ರಾಹ್ಮಣರಿಗೆ ಸಹನೆಯಿಲ್ಲ. ಇಬ್ಬರನ್ನೂ ಸುಲಿದು ಗುಜರಾತಿ, ಮಾರವಾಡಿಗಳು ತಿಂದರೆ ಆಗ ಇಬ್ಬರಿಗೂ ಸಮಾಧಾನ, ತೃಪ್ತಿ.'

'ಇದನ್ನು ಹೇಗೆ ಎದುರಿಸಬೇಕು ?'

'ನಾನಾ ರೀತಿಯಲ್ಲಿ. ಜಾತಿಯನ್ನು ಮುಂದೆ ಮಾಡಿಕೊಂಡು ಅದರ ನೆರಳಿನಲ್ಲಿ ಬಾಳ ಬಯಸುವುದು ನೈಚ್ಯಾನುಸಂಧಾನದ ಲಕ್ಷಣ. ಜಾತಿಯನ್ನು ನಿರ್ಣಯಿಸುವುದು ವ್ಯಕ್ತಿಯ ಹುಟ್ಟಲ್ಲ, ಬಾಳು—ಬದುಕು. ನಾನು ಮೊದಲೇ ಹೇಳಿದಂತೆ ತನ್ನ ಸಮಾಜದ ಉದ್ಧಾರವನ್ನೇ ಗುರಿಯನ್ನಿಟ್ಟುಕೊಂಡಿರುವವನು ಒಂದು ದೃಷ್ಟಿಯಿಂದ ಗೌರವಾರ್ಹನೇ. ಆದರೆ ಸಾರ್ವಜನಿಕ ಜೀವನದಲ್ಲಿ ನಿಸ್ವಾರ್ಥ ಬುದ್ಧಿಯಿಂದ ತಮ್ಮ ಸಮಾಜದ ಅಭ್ಯುದಯಕ್ಕೆ ಹೆಣಗುವವರು ವಿರಳ. ಆದರೆ ಸಮಾಜವನ್ನು ತಮ್ಮ ಲಾಲಸೆಗೆ ದುರುಪಯೋಗಪಡಿಸಿಕೊಳ್ಳತಕ್ಕವರೇ ಹೆಚ್ಚು. ಸಂಸ್ಥೆಗಳಲ್ಲಿ ಸ್ಥಾನ ಬೇಕು, ಅಸೆಂಬ್ಲಿ, ಕೌನ್ಸಿಲ್‌ಗಳಿಗೆ ಚುನಾವಣೆ ಹೊಂದಬೇಕು, ಸರ್ಕಾರದಲ್ಲಿ ಒಂದು ಚಾಕರಿ ಬೇಕು-ಜಾತಿ ಆಗ ವಿರಾಜಿಸಿಬಿಡುತ್ತದೆ. ಜಾತಿಯ ಹೆಸರನ್ನು ಮುಂದೆ ಮಾಡಿಕೊಂಡು ಮೇಲಕ್ಕೆ ಬಂದಿರುವವರು ಎಷ್ಟು ಜನ ತಮ್ಮ ಸಮಾಜಕ್ಕೆ ಎಷ್ಟೆಷ್ಟು ಉಪಕಾರ ಸೇವೆಮಾಡಿದ್ದಾರೆ, ತಿಳಿಸಿ. ಇದಕ್ಕೆ ಒಂದು ದೃಷ್ಟಾಂತ ಕೊಡಲೇ ?'

'ದಯೆಯಿಟ್ಟು ಕೊಡಿ.'

'ಮೊನ್ನೆ ಒಬ್ಬ ಮಹನೀಯರು ಹಲವು ದೊಡ್ಡ ಮನುಷ್ಯರ ಸಹಿ ಹಾಕಿಸಿ ಕನ್ನಡ ಸಾಹಿತ್ಯ ಪರಿಷತ್ತಿಗೆ ಒಂದು ಪತ್ರ ಬರೆದರು. ಪರಿಷತ್ತು ಯೋಜಿಸಿರುವ ಕನ್ನಡ - ಕನ್ನಡ ನಿಘಂಟಿನ ಸಂಪಾದಕ ಮಂಡಳಿಯಲ್ಲಿ ವೀರಶೈವರ ಪ್ರಾತಿನಿಧ್ಯವಿಲ್ಲ. ಕನ್ನಡ ಸಾಹಿತ್ಯದ ಬಹ್ವಂಶ ವೀರಶೈವ ಸಾಹಿತ್ಯವಾದ್ದರಿಂದ ಪಾರಿಭಾಷಿಕ ಶಬ್ದಗಳನ್ನು ಸರಿಯಾಗಿ ಅರ್ಥ ಮಾಡಲು ವೀರಶೈವರು ಮಂಡಳಿಯಲ್ಲಿ ಇರಬೇಕು. ಇದೇ ವಾದ. ಪರಿಷತ್ತಿನ ಕಾರ್ಯ

ಕಾರಿ ಮಂಡಳಿ ತತ್ವವನ್ನು ಒಪ್ಪಿಕೊಂಡು ಇಬ್ಬರು ವೀರಶೈವ ವಿದ್ವಾಂಸರನ್ನು ನಿಘಂಟಿನ ಸಂಪಾದಕ ಮಂಡಳಿಗೆ ಸೇರಿಸಿಕೊಂಡಿತು. ಇದು ಎಲ್ಲರಿಗೂ ತೃಪ್ತಿಯನ್ನುಂಟುಮಾಡಿತು. ಆದರೆ ಇಷ್ಟೆಲ್ಲ ಹೆಣಗಿದ ನಮ್ಮ ಮಹನೀಯರಿಗೆ ತೃಪ್ತಿಯಾಗಲಿಲ್ಲ. ಅವರಿಗೆ ವೀರಶೈವರು ಸಂಪಾದಕ ಮಂಡಳಿಯಲ್ಲಿರಬೇಕಾದುದು ಮುಖ್ಯವಾಗಿರಲಿಲ್ಲ; ತಾವಿರಬೇಕಾದುದು ಮುಖ್ಯವಾಗಿತ್ತು. ಅದು ಯಾವಾಗ ಸಫಲವಾಗಲಿಲ್ಲ ಆಗ ಪರಿಷತ್ತನ್ನೂ ಅದರ ಕೆಲವು ಮಾನ್ಯ ಸದಸ್ಯರನ್ನೂ ಅವಹೇಳನಮಾಡುವ ವೃತ್ತಿಯನ್ನವಲಂಬಿಸಿದರು. ನಮ್ಮ ಸಾರ್ವಜನಿಕ ಜೀವನ ಹಾಳಾಗುತ್ತಿರುವುದು ಇಂತಹ ಮಹನೀಯರಿಂದಲೇ.'

'ಇವರು ನಿಮ್ಮ ಮೇಲೆ ಭಯಂಕರ ಅಪಪ್ರಚಾರ ಮಾಡುತ್ತಿದ್ದಾರಲ್ಲವೇ?'

'ಮಾಡುತ್ತಿದ್ದಾರೆ. ನಿಘಂಟಿನ ಸಂಪಾದಕ ಮಂಡಳಿಯಲ್ಲಿ ಈ ಮಹನೀಯರಿಗೆ ಮಣೆ ಹಾಕಿಸಲಿಲ್ಲವೆಂದು ನನ್ನ ಮೇಲೆ ಅವರಿಗೆ ಕೋಪ. ನನ್ನ 'ವೀರಶೈವ ಸಾಹಿತ್ಯ ಸಂಸ್ಕೃತಿ'ಯನ್ನು ವಿಮರ್ಶಿಸುತ್ತಾ ಇದೇ ಮಹನೀಯರು 'ಶ್ರೀಮಾನ್ ಕೃಷ್ಣರಾಯರ ಉದಾರ ಭಾವನೆಗಳೂ, ಸತ್ಯಾನ್ವೇಷಣವೂ, ವಿಮರ್ಶಾಬುದ್ಧಿಯೂ ಅವರ ಈ 'ಗ್ರಂಥ'ದಿಂದ ಹೊರಬಿದ್ದಿದೆ. ಮೈಸೂರು ಸೀಮೆಯ ಯಾವ ವೀರಶೈವ ವಿದ್ವಾಂಸರೂ ಮಾಡದಿದ್ದ ಕಾರ್ಯವನ್ನು ಶ್ರೀಮಾನ್ ಎಂ. ಆರ್. ಶ್ರೀನಿವಾಸಮೂರ್ತಿ ಬಿ. ಎ., ಶ್ರೀಮಾನ್ ಅ. ನ. ಕೃಷ್ಣರಾವ್ ಮೊದಲಾದ ಮಹನೀಯರು ಮಾಡುತ್ತಿದ್ದಾರೆ. ಈ ಉಪಕಾರಕ್ಕಾಗಿ ವೀರಶೈವ ಸಮಾಜವು ಅವರಿಗೆ ಋಣಿಯಾಗಬೇಕಾಗಿದೆ' ಎಂದು ಹೇಳಿದ್ದಾರೆ. ಮುಂದೆ ಉಭಯ ಸ್ನೇಹಿತರೊಬ್ಬರು ವೀರಶೈವ ಕಾವ್ಯವೊಂದನ್ನು ಪರಿಷ್ಕರಿಸಲು ನನ್ನಲ್ಲಿ ಕೊಟ್ಟುದಕ್ಕೆ ಅವರನ್ನು ಆಕ್ಷೇಪಿಸಿ ವೀರಶೈವ ಸಾಹಿತ್ಯದ ಗಂಧ ನನಗೆ ಗೊತ್ತಿಲ್ಲ ಎಂದು ಪೂತ್ಕಾರ ಮಾಡಿದವರೂ ಇವರೇ. ನನ್ನ ವೀರಶೈವ ಸಾಹಿತ್ಯ ಗ್ರಂಥಗಳಲ್ಲಿ ಭಿನ್ನಾಭಿಪ್ರಾಯಕ್ಕೆ ಅವಕಾಶವಿದ್ದರೆ 'ಇವನು ಹುಟ್ಟಾ ಬ್ರಾಹ್ಮಣ. ವೀರಶೈವರ ಮೇಲಿನ ವಿದ್ವೇಷದಿಂದ ಹೀಗೆ ಬರೆದಿದ್ದಾನೆ' ಎಂದು ಅಪಪ್ರಚಾರ ಮಾಡುತ್ತಿದ್ದರು. ಆದರೆ ಅದಕ್ಕೆ ಅವಕಾಶವಿಲ್ಲ. ಬಸವಾದಿ ಪ್ರಮಥರ ಬಗ್ಗೆ ನನಗಿರುವ ಗೌರವ, ವಿಶ್ವಾಸ, ಭಕ್ತಿ,

ಯಾರಿಗೂ ಕಡಿಮೆಯಾದುದಲ್ಲ. ಇದು ಲೋಕವಿದಿತವಾಗಿದೆ. ಆದ್ದರಿಂದ ಅಂತಹ ಪ್ರಚಾರಕ್ಕೆ ಮಾರ್ಗವಿಲ್ಲದೆ

'ಇವರು ಬಹಿರಂಗದಲ್ಲಿ ವೀರಶೈವರ ಮಿತ್ರರೆಂದು ತೋರಿಸಿಕೊಂಡು ಅವರಿಂದ ಲಾಭ ಪಡೆಯುವ ಹಂಚಿಕೆಗಳನ್ನು ಮಾಡುತ್ತಿದ್ದರೂ ಒಳಗೆ ಅವರ ಪ್ರಾತಿನಿಧ್ಯವನ್ನು ವಿರೋಧಿಸಿದ್ದು ಕೆಲವರಿಗೆ ಆಶ್ಚರ್ಯವುಂಟುಮಾಡಿದೆಯಂತೆ' ಎಂದು ಬರೆದಿದ್ದಾರೆ.

ಒಬ್ಬ ಮನುಷ್ಯನ ಉತ್ತಮ ಕೆಲಸಗಳನ್ನು ಹಾಳುಮಾಡಬೇಕಾದರೆ ಲೋಕದಲ್ಲಿ ಎರಡು ಮಾರ್ಗ. ಒಂದು ಅವನು ವ್ಯಭಿಚಾರಿಯೆಂದು ಆರೋಪಿಸಿ ಅವನನ್ನು ಕೊಲ್ಲುವುದು. ಐರಿಷ್ ರಾಜಕಾರಣ ಮುತ್ಸದ್ದಿಯಾದ ಪಾರ್ನೆಲ್‌ನನ್ನು ಬ್ರಿಟಿಷರು ಮುರಿದಿದ್ದು ಇಂತಹ ಅಪಾದನೆ, ಅಪಪ್ರಚಾರಗಳ ಆಧಾರದಿಂದಲೇ. ಎರಡನೆಯದು ಹಣ ತೆಗೆದುಕೊಂಡು ಅದಕ್ಕಾಗಿ ದುಡಿಯುತ್ತಿದ್ದಾನೆಂದು. ರಷ್ಯಾದ ಮೇಲೆ ಗೌರವ ತೋರಿಸಿದ ನೆಹ್ರೂ, ಪಿ. ಸಿ. ಜೋಶಿ, ಇವರೆಲ್ಲಾ ರಷ್ಯಾದ ವಿಕ್ರೀತಪಾಠಕರು ಎಂಬ ಪ್ರಚಾರವನ್ನು ಬ್ರಿಟಿಷ್ ಸರ್ಕಾರ ಮಾಡಿತು. ನಮ್ಮ ಮಹನೀಯರು ಇದೇ ಹೇಯ ಮನೋಭಾವನೆಯ ಮರಿ.'

'ಇವರು ಪ್ರತಿಯೊಂದು ರಂಗದಲ್ಲಿಯೂ ಇದೇ ನೀತಿಯನ್ನು ಅವಲಂಬಿಸಿ ಸಾರ್ವಜನಿಕ ಜೀವನವನ್ನು ಕುಲಗೆಡಿಸುತ್ತಿದ್ದಾರಲ್ಲಾ-ಲೋಕ ಏಕೆ ಸುಮ್ಮನಿದೆ'

'ಇವರ ಬಾಯಿಗೆ ಅಂಜಿ. ಸುಮ್ಮಸುಮ್ಮನೆ ಇವರ ಅಪ-ಪ್ರಚಾರಕ್ಕೆ ತುತ್ತಾಗಿ ತೊಂದರೆಗೀಡಾಗಬಾರದೆಂದು. ಸಾರ್ವಜನಿಕ ಜೀವನದಲ್ಲಿ ಈ ಮಹನೀಯರದು ಒಂದು ಕೀಳ್ತರದ ನಾಜಿ ಪ್ರಭುತ್ವ.'

'ನೀವು ಎದುರಿಸುತ್ತೀರಾ?'

'ಇವರನ್ನೂ ಇವರ ಹಾಗೆ ಇರುವ ಎಲ್ಲರನ್ನೂ ಎದುರಿಸುತ್ತೇನೆ. ಎದುರಿಸಬಲ್ಲೆ. ನನ್ನ ಹಿಂದೆ ಇಡೀ ಜಾಗೃತ ಜನಾಂಗವಿದೆ–ಶ್ರಮಜೀವಿಗಳಿದ್ದಾರೆ–ವಿದ್ಯಾರ್ಥಿಗಳಿದ್ದಾರೆ–ದೇಶದ ನಿಜವಾದ ಪ್ರೇಮಿಗಳಿದ್ದಾರೆ–ಸಮಾಜದ ಹಿತೈಷಿಗಳಿದ್ದಾರೆ. ಯಾರಿಗೆ ಈ ವಿಷಪ್ರಸರಣ ಹಿತವಾದೀತು. ಆ ಮಹನೀಯರಿಗೆ ಇದೋ ನನ್ನ ಎಚ್ಚರಿಕೆ. ಸಾರ್ವಜನಿಕ ಜೀವನದಲ್ಲಿ ಈ ವಿಷಪ್ರಸಾರವನ್ನು

ನಿಲ್ಲಿಸಿ. ಸಾಧ್ಯವಾಗದಿದ್ದರೆ ಸಾರ್ವಜನಿಕ ಜೀವನದಿಂದ ತೊಲಗಿ. ನೀವು ತೊಲಗದಿದ್ದರೆ ನಾವು ತೊಲಗಿಸುತ್ತೇವೆ.'

'ಇದು ಬಹಳ ಉಗ್ರ ಧೋರಣೆ.'

'ಮಿತವಾದ ಹಿತವಾದಗಳ ಕಾಲ ಆಗಿಹೋಯಿತು. ಎಷ್ಟು ದಿವಸ ಈ ದೇಶವಿಘಾತಕ ನಡತೆಯನ್ನು ಸಹಿಸುವುದು. ದೇಶದ ವಿವಿಧ ಬಣಗಳನ್ನು ಕೂಡಿಸುವ, ಕಟ್ಟುವ ಕೆಲಸದಲ್ಲಿ ನಾವು ಹಗಲಿರುಳು ದುಡಿಯುತ್ತಿದ್ದೇವೆ. ಅದು ಕೆಲವು ಸ್ವಾರ್ಥಸಾಧಕರಿಂದ ಹಾಳಾಗಬೇಕೇ? ನಾವೂ ಹೊಲಸಿನೊಂದಿಗೆ ಒಪ್ಪಂದಮಾಡಿಕೊಳ್ಳಬೇಕೇ?'

'ನಿಮಗೆ ಇದರಿಂದ ಬಹಳ ಹಾನಿಯಾಗುತ್ತದೆ. ನೀವು ಉದ್ದೇಶಿಸಿರುವ ಗ್ರಂಥರಚನಾ ಕೆಲಸಕ್ಕೆ ಪ್ರತಿಬಂಧಕವಾಗುತ್ತದೆ. ವೀರಶೈವರೂ ಇತರರೂ ನೀವು 'ವೀರಶೈವ ಸಾಹಿತ್ಯ'ದ ಮೇಲೆ ಬರೆಯಲಿರುವ ಗ್ರಂಥಗಳನ್ನು ಆದರ ದಿಂದ ನಿರೀಕ್ಷಿಸುತ್ತಿದ್ದಾರೆ.'

'ನಾನು ಬಲ್ಲೆ. ಅವರ ವಿಶ್ವಾಸಕ್ಕೆ ನಾನು ಕೃತಜ್ಞ. ನನ್ನಿಂದ ಆ ದೃಷ್ಟಿಯಲ್ಲಿ ಉತ್ತಮ ಕೆಲಸವಾಗುತ್ತದೆ ಎಂಬುದು ನನಗೂ ಗೊತ್ತು. ಸುಳ್ಳು ವಿನಯ ನನ್ನಲ್ಲಿಲ್ಲ. ಬಸವಣ್ಣನ ಅಮೃತವಾಣಿಯನ್ನು ಕೇಳಿಸಿದ್ದೇನೆ. ಪ್ರಭುದೇವರ ಮುಕ್ತವಾಣಿ, ಮಹಾದೇವಿಯಕ್ಕನ ಕಾವ್ಯವಾಣಿ, ಚನ್ನ ಬಸವಣ್ಣನ ದಿವ್ಯವಾಣಿ, ಸಿದ್ಧರಾಮನ ತ್ಯಾಗವಾಣಿಗಳನ್ನು ನಮ್ಮ ಜನಕ್ಕೆ ಕೇಳಿಸಬೇಕೆಂದು ನನಗೂ ಉತ್ಕಟ ಹಂಬಲವಿದೆ. ಪ್ರಮಥರ ದಿವ್ಯಸಂದೇಶ ಗಳಿಂದ ನಮ್ಮ ಜನ ಬದುಕುತ್ತಾರೆ, ಅವರ ಬಾಳು ಹಸನಾಗುತ್ತದೆ, ನನ್ನ ಜನ್ಮ ಸಾರ್ಥಕವಾಗುತ್ತದೆ. ಈ ಕೆಲಸ ನನ್ನಿಂದಾಗದಿದ್ದರೆ ಇದರ ಉತ್ತರವಾದಿತನ ವೀರಶೈವ ಸಮಾಜದ್ದಾಗುತ್ತದೆ. ಅವರು ನನಗಾಗಿ, ಸಮಾಜಕ್ಕಾಗಿ, ದೇಶ ಕ್ಕಾಗಿ ಇಂತಹ ಕೋಮುವಾರು, ಸ್ವಾರ್ಥಭೂತಗಳನ್ನು ಮರಿಯಬೇಕು.'

'ನಿಮ್ಮ ಕೆಲಸ ಸಾಗಲಿ. ಇದರಿಂದ ಉದ್ರಿಕ್ತರಾಗಬೇಡಿ. ದೂರದರ್ಶಿ ಗಳೂ, ದೇಶಪ್ರಿಯರೂ ಆದ ವೀರಶೈವರು ನಿಮ್ಮ ವಾಕ್ಕಿಗೆ ಖಂಡಿತವಾಗಿಯೂ ಓ ಕೊಡುತ್ತಾರೆ.'

'ಸಂತೋಷ. ನನಗೆ ಬೇಕಾದುದೂ ಅಷ್ಟೇ.'

'ಬಹಳ ವೇಳೆಯನ್ನು ತೆಗೆದುಕೊಂಡೆ.'

'ಚಿಂತೆಯಿಲ್ಲ. ನನ್ನ ಮನಸ್ಸೂ ಹಗುರವಾಯಿತು.'

ಎಂದು ರಾಯರು ತಮ್ಮ ಪುಸ್ತಕದ ಕಪಾಟಿಗೆ ಕೈಹಾಕಿ ಒಂದು ಪುಸ್ತಕವನ್ನು ಎಳೆದುಕೊಂಡರು. ಅದು 'ಅಲ್ಲಮ ಪ್ರಭುವಿನ ವಚನಗ್ರಂಥ'ವಾಗಿತ್ತು. ನಾನು ಸದ್ದಿಲ್ಲದೆ ಎದ್ದು ಬಂದೆ.

---::---

ಕಂಡದ್ದು ಐದನೆಯ ಸಲ

# ಪ್ರಗತಿಶೀಲ ಸಾಹಿತ್ಯ

ಇತ್ತೀಚೆಗೆ ಪ್ರಗತಿಶೀಲ ಸಾಹಿತ್ಯದ ಕೂಗು ಬಹಳ ಕೇಳಿ ಬರುತ್ತಿದೆ. ದೆಲ್ಲಿಯಿಂದ ಕರ್ನಾಟಕದವರೆಗೂ 'ಪ್ರಗತಿಶೀಲ ಸಾಹಿತ್ಯ'ದ ಪಾಂಚಜನ್ಯ. ಶ್ರೀ ಕೃಷ್ಣರಾಯರು ಬೆಂಗಳೂರು ಪ್ರಗತಿಶೀಲ ಲೇಖಕರ ಸಂಘದ ಅಧ್ವರ್ಯು ಗಳಾಗಿದ್ದರೆಂದು ಕೇಳಿ ಆ ಬಗ್ಗೆ ಅವರಿಂದ ವಿಷಯ ಸಂಗ್ರಹಿಸಲು ಬಂದೆ.

ರಾಯರು ಸ್ವಾಗತ ಬಯಸಿದರು.

'ಇಂದು ಯಾವ ವಿಷಯ ಚರ್ಚಿಸೋಣ.'

'ನಿಮಗೆ ಅತ್ಯಂತ ಪ್ರಿಯವಾದದ್ದು.'

'ಸಾಹಿತ್ಯವೇ?'

'ಹೌದು ಪ್ರಗತಿಶೀಲ ಸಾಹಿತ್ಯ.'

'ಆ ಬಗ್ಗೆ ನಮ್ಮ ಅಭಿಪ್ರಾಯಗಳನ್ನು ವ್ಯಕ್ತ ಮಾಡಬೇಕಾಗಿದೆ. ಟೀಕಾಕಾರರು ಈಚೆಗೆ ಬಹಳವಾಗಿ ಆಗಿದ್ದಾರೆ. ನಮ್ಮ ವಿಚಾರಗಳನ್ನು ತಿಳಿದುಕೊಳ್ಳುವ ಔದಾರ್ಯ ಅವರು ತೋರಿಸಿಲ್ಲ. ನಾವಾದರೂ ಅವರಿಗೆ ನಮ್ಮ ವಿಚಾರಗಳನ್ನು ತಿಳಿಯ ಹೇಳುವ.'

'ಸಾಹಿತ್ಯವೇ ಪ್ರಗತಿಶೀಲವಾದದ್ದು. ಅದಕ್ಕೆ ಪ್ರಗತಿಶೀಲವೆನ್ನುವ ವಿಶಿಷ್ಟ ನಾಮಕರಣವೇಕೆ?'

'ಸಾಹಿತ್ಯವೆಲ್ಲಾ ಪ್ರಗತಿಯನ್ನು ಉದ್ದೇಶಿಸುತ್ತದೆ ಎಂದು ನಿಮಗೆ ಯಾರು ಹೇಳಿದರು. ಹಿಂದೆ ಆಗಿ ಹೋದುದನ್ನೇ ಮತ್ತೆ ಮತ್ತೆ ಅರಳಿಸಿ ಕೆರಳಿಸಿ ಹೇಳುವುದು ಸಾಹಿತ್ಯದ ಮುಖ್ಯ ಲಕ್ಷಣವಾಗಿದೆ. ಅದರಲ್ಲಿ ಮುಂದು ವರಿದ ಸಾಹಿತ್ಯವೆಂದರೆ ಸ್ವಲ್ಪಮಟ್ಟಿಗೆ ಇಂದಿನದನ್ನು ಹೇಳುವುದು. ಆಚಾ ರದ ಚೌಕಟ್ಟನ್ನು ಬಿಟ್ಟು ಶಿಷ್ಟಸಂಪ್ರದಾಯದ ಕೃತಕ ಎಲ್ಲೆಯನ್ನು ತ್ಯಜಿಸಿ ಸಾಹಿತ್ಯ 'ಹೊರಗೆ ಬಂದಿಲ್ಲ. ಅಂದಿನ ರಾಮಾಯಣದ ಮೊದಲು ಗೊಂಡು ಇಂದಿನ ರಾಮಾಯಣದವರೆಗೂ ಇದೇ ಹಾಡು.'

'ಜಗತ್ತಿನ ಮಹಾ ಕಾವ್ಯಗಳಲ್ಲಿ ಒಂದಾದ ರಾಮಾಯಣವನ್ನು ನೀವು ಮಾನಿಸುವುದಿಲ್ಲವೇ?'

'ಮಾನಿಸುತ್ತೇನೆ. ಐತಿಹಾಸಿಕ ಗ್ರಂಥವಾಗಿ, ಸಮಾಜ ಚರಿತ್ರೆಯೆಂದು, ಉತ್ತರದ ಮನೋಭಾವನೆಯ ರಸಗನ್ನಡಿಯೆಂದು.'

'ಇದಕ್ಕೆ ಸ್ವಲ್ಪ ವಿವರಣೆ ಬೇಕಾಗುತ್ತದೆ.'

'ವಾಲ್ಮೀಕಿ ಹದಿನಾರಾಣೆ ಔತ್ತರೇಯ. ಇವತ್ತಿನ ಹಿಂದೀ ಪ್ರಚಾರಕರು ದಕ್ಷಿಣದ ಜನ, ಸಂಸ್ಕೃತಿ, ಸಾಹಿತ್ಯಗಳ ಬಗ್ಗೆ ಯಾವ ಅಪ-ಪ್ರಚಾರ ಮಾಡುತ್ತಿದ್ದಾರೆಯೋ ಅದೇ ಕೆಲಸವನ್ನು ವಾಲ್ಮೀಕಿ ನಿರ್ವಹಿಸಿದ್ದಾನೆ. ಇದನ್ನು ರಾಮರಾಜ್ಯದ 'ಮದರ್ ಇಂಡಿಯಾ' ಎಂದು ಕರೆಯಬಹುದು. ರಾಮನಿಗೆ ರಾಣಿಯನ್ನೂ ರಾಜ್ಯವನ್ನೂ ಹಿಂದಕ್ಕೆ ತಂದು ಕೊಟ್ಟ ಕನ್ನಡಿಗರನ್ನು ಕಪಿ, ಕರಡಿ ಎಂದು ಕರೆಯಬೇಕಾದರೆ ವಾಲ್ಮೀಕಿಯ ದಾಷ್ಟ್ರ್ಯ ಎಷ್ಟಿರಬೇಕು.'

'ಹಾಗಾದರೆ ದಕ್ಷಿಣಾತ್ಯರು ಅದನ್ನು ತಲೆಯ ಮೇಲಿಟ್ಟುಕೊಂಡು ಮೆರೆದರೇಕೆ? ಅದನ್ನು ಅವಲಂಬಿಸಿ, ಹಲವಾರು ಗ್ರಂಥಗಳನ್ನು ಬರೆದರೇಕೆ?'

'ದಕ್ಷಿಣದ ಚಿತ್ತದಾಸ್ಯದ ಮತ್ತೊಂದು ನಿದರ್ಶನ. ಆಂಗ್ಲೇಯರು ಹಿಂದೂಸ್ಥಾನದ ಮೇಲೆ ಅಪ-ಪ್ರಚಾರ ಮಾಡಿ ಅನೇಕ ಗ್ರಂಥಗಳನ್ನು ಬರೆದಿದ್ದಾರೆ. ಅವರನ್ನು ಮೀರಿಸಿ ಹಿಂದೂಸ್ಥಾನವನ್ನು ಅಲ್ಲಗಳೆದು ನಮ್ಮವರೇ ಗ್ರಂಥಗಳನ್ನು ಬರೆದಿಲ್ಲವೇ? ಹಾಗೆ.'

'ರಾಮಾಯಣಕ್ಕೆ ಬೆಲೆ ಕೊಡಬಾರದೆಂದು ನಿಮ್ಮ ಮತವೋ?'

'ಇದು ಹೊಸದಾಗಿ ನಾನು ಹೇಳುವ ಮಾತಲ್ಲ. ಹದಿನೈದನೆಯ ಶತಮಾನದಲ್ಲಿಯೇ ಚಾಮರಸ ಕವಿ ತನ್ನ ವಿರೋಧವನ್ನು ಸೂಚಿಸಿದ್ದಾನೆ. ನಮಗೆ ಚರ್ವಿತ ಚರ್ವಣ ಬೇಕಿಲ್ಲ.'

'ಜೀವನ ಎಲ್ಲಾ ಕಾಲದಲ್ಲಿಯೂ ಒಂದೇ ಅಲ್ಲವೇ?'

'ಜೀವನ ಒಂದೇ ಎಂದಿಗೂ ಅಲ್ಲ. ಅದು ಕಾಲಕಾಲಕ್ಕೆ ದೇಶದೇಶಕ್ಕೆ ಬದಲಾಯಿಸುತ್ತಿರುತ್ತದೆ. ಜೀವನದ ಹಿಂದಿನ ಮಾನವ ಗುಣ (ಸಹಜ ಗುಣ) ಮಾತ್ರ ಶಾಶ್ವತ. ಅಂತಹ ಸಹಜ ಗುಣ ಕಾಣಬರುವುದು ರಾಮಲಕ್ಷ್ಮಣರ ಕಥೆಗಳಲ್ಲಲ್ಲ; ಸಾಮಾನ್ಯ ಮನುಷ್ಯನ ಜೀವನ ಸಾರ್ಥಕತೆಯಲ್ಲಿ. ಒಬ್ಬ

ಮನುಷ್ಯನಿಗೆ ಅವತಾರದ ಪಟ್ಟಗಟ್ಟಿ ಅವನ ದುರ್ನಡತೆಗಳನ್ನೆಲ್ಲಾ ಮಾಸಿಸುವುದು ವಿಚಾರಕ್ಕೆ ಒಪ್ಪದ ಮಾತು. ಪುಟ್ಟಪ್ಪನವರ ಕವಿ ಹೃದಯ ಇಂತಹ ಅತ್ಯಾಚಾರ ಕೇಳಿ ಉರಿದೆದ್ದು 'ಶೂದ್ರ ತಪಸ್ವಿ'ಯಲ್ಲಿ ಪ್ರತಿಧ್ವನಿತವಾಗಿದೆ. ಸಾಮಾನ್ಯ ಮನುಷ್ಯ ತನ್ನ ಉಪಾಧಿಗಳನ್ನು ಬಿಡಿಸಿಕೊಂಡು ಕರ್ಮ ಶೃಂಖಲೆಗಳನ್ನು ಕತ್ತರಿಸಿಕೊಂಡು ಸನ್ನುತ ಜೀವನದ ಕಡೆಗೆ ತೆರಳುವ ಸಾಹಸದ ಕಥೆಯಲ್ಲಿಯೇ ನಿಜವಾದ ಅಧ್ಯಾತ್ಮ, ಸಾಹಿತ್ಯ, ದರ್ಶನ ಎಲ್ಲಾ ಅಡಕವಾಗಿರುವುದು.'

'ನಿಮ್ಮ ಗುರಿ ಸಾಮಾನ್ಯ ಮಾನವನ ಗುರಿ.'

'ಹೌದು. ಯಾರ ಕಣ್ಣಿಗೂ ಬೀಳದೆ ಯಾವ ಹೊಗಳಿಕೆಯನ್ನೂ ಬಯಸದೆ, ಯಾವ ವಾಲ್ಮೀಕಿಯ ಪ್ರಕಟನ ಪವಾಡಕ್ಕೂ (Publicity Campaign) ಸಿಕ್ಕದೆ ಬಾಳಿ, ಕಣ್ಮರೆಯಾಗುವ ಪೆರುಮಾಳನ ಸತ್ಯಪ್ರಿಯತೆ ಯಾವ ರಾಮ, ಹರಿಶ್ಚಂದ್ರರಿಗೂ ಕಡಿಮೆಯಾದುದಲ್ಲ; ಮೀನಾಕ್ಷಮ್ಮ ರತ್ನಮ್ಮರ ಪಾತಿವ್ರತ್ಯ ಯಾವ ಸೀತೆ, ಸಾವಿತ್ರಿ, ದಮಯಂತಿಯರಿಗೂ ಕಡಮೆಯಾದುದಲ್ಲ.'

'ನಮ್ಮ ಸಾಹಿತಿಗಳ ದೃಷ್ಟಿ ಈ ಕಡೆಗೆ ಹೊರಳುವುದಿಲ್ಲವೇಕೆ?'

'ಬಹು ಜನ ನಮ್ಮ ಕವಿಗಳು ಪಲಾಯನವಾದಿಗಳು (Escapists) ನಿಜ ನಿತ್ಯಜೀವನಕ್ಕೆ ಸಂಬಂಧಿಸುವ ವಿಷಯಗಳೆಂದರೆ ಅವರಿಗೆ 'ಗುಮ್ಮಯ್ಯ'ನನ್ನು ಕಂಡ ಹಾಗಾಗುತ್ತದೆ. ಒಬ್ಬ ಮಹಾರಾಜರು ತೀರಿಕೊಂಡರೆ ಕವಿಗಳ ಮೇಲೆ ಕವಿಗಳು ಚರಮ ಶ್ಲೋಕಗಳನ್ನು ಬರೆಯಲು ಧಾವಿಸುತ್ತಾರೆ. ಬಂಗಾಳ, ಬಿಜಾಪುರ, ಕೇರಳಗಳಲ್ಲಿ ಸಾವಿರ, ಲಕ್ಷಗಟ್ಟಳೆ ಜನ ಹೊಟ್ಟೆಗಿಲ್ಲದೆ ಸತ್ತರೆ ನಮ್ಮ ಕವಿಗಳ ಕರುಳು ಮಿಡಿಯುವುದಿಲ್ಲ. ರಾವಣ, ಜರಾಸಂಧ, ಶಿಶುಪಾಲಾದಿ ರಾಕ್ಷಸರ ದಬ್ಬಾಳಿಕೆಯನ್ನು ಖಂಡಿಸಲು ನಮ್ಮ ಕವಿಗಳು ಮುನ್ನುಗ್ಗುತ್ತಾರೆ. ಆದರೆ ನಾಜಿ ರಾಕ್ಷಸ, ಫಾಸಿಸಂ ದೈತ್ಯ, ಬಂಡವಾಳಶಾಹಿ, ಸಾಮ್ರಾಜ್ಯಶಾಹಿ ರಾಕ್ಷಸರ ವಿರೋಧವಾಗಿ ನಮ್ಮ ಕವಿಗಳು ಒಂದು ಚಕಾರ ಶಬ್ದವನ್ನು ಎತ್ತುವುದಿಲ್ಲ, ನಮ್ಮ ಕವಿಗಳು ಮನುಷ್ಯರಲ್ಲ, ಅವರಲ್ಲಿ ಅಂತಃಕರಣವಿಲ್ಲ, ಅವರ ಹೃದಯದಲ್ಲಿ ನೀಚತನ, ಸುಲಿಗೆ, ದಬ್ಬಾಳಿಕೆಗಳನ್ನೆದುರಿಸುವ

ಅಮೃತಾಗ್ನಿಯಿಲ್ಲ. ಅವರು ಪದ್ಯ ಬರೆಯುವ ಸಜೀವ ಯಂತ್ರಗಳು.'

'ಇದನ್ನು ಎಲ್ಲರಿಗೂ ಪ್ರಯೋಗಿಸುತ್ತೀರಾ?'

'ಮುಖ್ಯವಾಗಿ ಹಿರಿಯರಿಗೆ. ಯಾರು ನಾಡಿನ ಕಿರಿಯರಿಗೆ ದಾರಿ ತೋರಿಸಬೇಕೋ, ಯಾರು ತಮ್ಮ ಜೀವನಾದರ್ಶವನ್ನು ಕಿರಿಯರ ದಾರಿ ದೀವಿಗೆ ಮಾಡಬೇಕೋ ಅವರ ಮೇಲೆ ನನ್ನ ಆಕ್ಷೇಪಣೆ. ಪ್ರಗತಿಶೀಲರಾದ ಕಿರಿಯರು ಹಿರಿಯರ ಕೈಬಿಟ್ಟು ಸ್ವತಂತ್ರ ಮಾರ್ಗಗಳನ್ನು ಹುಡುಕಿಕೊಳ್ಳುತ್ತಿದ್ದಾರೆ. ಇದೇ ಒಂದು ಆಶಾಕಿರಣ.'

'ಅಂತಹ ಕವಿಗಳು ಯಾರು?'

'ಮಂಗಳೂರಿನ ಕುಮಾರ ವೆಂಕಣ್ಣನವರ ತೇಜಸ್ವೀ ಲೇಖನಿ ಬಂಗಾಳಕ್ಕೆ ಮುಡಿಪಾಗಿದೆ. ಬಂಗಾರ ಬಂಗಾಳದ ಬರಗಾಲವನ್ನು ಕಂಗಾಲ ಸ್ಥಿತಿಯನ್ನು ಕುರಿತು ಕವಿ ಹಲವು ಗೀತೆಗಳನ್ನು ಬರೆದಿದ್ದಾರೆ. ಮೈಸೂರಿನ ಅನಂತ ನಾರಾಯಣ ಅವರ 'ಕವಿ ಕೂಲಿಗಾರ' ಗಂಗೆಯನ್ನಿಳಿಸುತ್ತಿರುವ ಭಗೀರಥರಿಗೆ ಮಾರ್ಗದರ್ಶಕವಾಗಬೇಕು. ಅರ್ಚಕ ವೆಂಕಟೇಶರ ಕವಿತೆ ಬಡವರ ಬಗ್ಗರ ದೀನರ ಹೃದಯ ವೀಣೆಯಾಗಿದೆ. ಮಂಗಳೂರಿನ ಕೆ. ಕೆ. ಶೆಟ್ಟಿ, ವಿದ್ವಾನ್ ಬಿ. ಶಂಕರಭಟ್ಟರು, ಕುಳಕುಂದ ಶಿವರಾಯರು, ಬೆಂಗಳೂರಿನ ಬಸವರಾಜ ಕಟ್ಟೀಮನಿ, ಶ್ರೀಕಂಠೇಶ್ವರನ್, ತ. ರಾ. ಸು, ಇವರು ಕಥೆ, ನಾಟಕಗಳ ಮೂಲಕ ಶ್ರಮಜೀವಿಗಳ ವಾಣಿಯಾಗಿದ್ದಾರೆ. ನಿರಾಶೆ, ಸಂತಾಪ, ದಾರಿದ್ರ್ಯಗಳಿಂದ ಚಡಪಡಿಸುತ್ತಿರುವ ನಮ್ಮ ಜನಕ್ಕೆ ಧೈರ್ಯ, ಆಸೆ, ಶಾಂತಿಯನ್ನು ಕೊಡುತ್ತಿದ್ದಾರೆ. ಸಾಹಿತ್ಯಇತಿಹಾಸವನ್ನು ಕಟ್ಟುವವರು ಇವರೇ ಅಲ್ಲದೆ ನ-ಣ ವಾದಿಗಳಲ್ಲ, ಅಸುಕಥಾವಲ್ಲರಿಕಾರರಲ್ಲ, ಹೊಟ್ಟೆತುಂಬಿದ ರಾಜಸೇವಾಸಕ್ತ, ಪ್ರಸಕ್ತರೂ ಅಲ್ಲ.

'ಹಿರಿಯರ ನಾಯಕತ್ವವಿನ್ನೂ ಉಳಿದಿರುವುದೇತಕ್ಕೆ?'

'ಸಮಾಜದಲ್ಲಿ ಅವರಿಗಿರುವ ಪ್ರತಿಷ್ಠೆಯಿಂದ, ಜನಗಳಲ್ಲಿ ಮೂಡಿರುವ ಗಾಢ ಅಂಧಕಾರದಿಂದ. ಸಮಾಜಕ್ಕೆ ಕಣ್ಣಿಲ್ಲ. ಸಮಾಜದ ಸರ್ವತೋಮುಖ ಪ್ರಗತಿಯನ್ನು ಸಾಧಿಸಲೆಳಸಿದ ತಾರಾನಾಥರು, ತಿ. ತಾ. ಶರ್ಮ, ದ. ಕೃ. ಭಾರದ್ವಾಜರು, ಆಲೂರ ವೆಂಕಟರಾಯರು, ಉತ್ತಂಗಿ ಚೆನ್ನಪ್ಪನವರು,

ಸುಬೋಧ ರಾಮರಾಯರು ಇವರ ಸೇವೆ ಎಷ್ಟು ಜನರ ಕಣ್ಣಿಗೆ ಬಿದ್ದಿದೆ ಹೇಳಿ. ಏತಕ್ಕೆ ಬಲ್ಲಿರಾ? ಇವರಿಗೆ ಶ್ರೀಮಂತಿಕೆಯಿಲ್ಲ, ಬಿರುದಾವಳಿಗಳಿಲ್ಲ, ವಂದಿ ಮಾಗಧರ ತಂಡವಿಲ್ಲ. ಈ ಪರಿಸ್ಥಿತಿ ಹೋಗಬೇಕು. ನಿಜವಾದ ಸೇವೆ, ತ್ಯಾಗ, ವೈರಾಗ್ಯಗಳಿಗೆ ಜನ ಬೆಲೆ ಕೊಡುವಂತಾಗಬೇಕು.'

'ಪ್ರಗತಿಶೀಲ ಲೇಖಕರು ಇದನ್ನು ಸಾಧಿಸುತ್ತಾರೆಯೋ?'

'ಸಾಧಿಸುತ್ತಾರೆ. ಅವರ ಕಾರ್ಯಕ್ರಮಗಳಲ್ಲಿ 're-valuation of values' ಎಂಬುದೂ ಒಂದು. ಯಾವದು ಹೊನ್ನು, ಯಾವದು ಮಣ್ಣು ಎಂದು ನಿರ್ಧರಿಸಿ ಹೇಳುವ ಅಪ್ರಿಯವಾದ ಕೆಲಸವನ್ನು ಪ್ರಗತಿಶೀಲ ಲೇಖಕರು ಕೈಗೊಂಡಿದ್ದಾರೆ. ಕರ್ಮಯೋಗಿಗಳ ಸಂದೇಶ ನಮ್ಮ ಜನಕ್ಕೆ ಮುಟ್ಟಬೇಕು. ಹಾಗೆ ಮುಟ್ಟಿಸುವ ವಾಹಕ ಪ್ರ. ಶೀ. ಲೇ ಸಂಘ.'

'ಯಾರನ್ನು ಕರ್ಮಯೋಗಿಗಳೆನ್ನುತ್ತೀರಿ.'

'ಶ್ರಮಜೀವಿಗಳನ್ನು. ಸಾಮಾನ್ಯ ಮಾನವತೆಯನ್ನು. ನಮ್ಮ ವಿರೋಧ ಸಂಪ್ರದಾಯಮೌಢ್ಯದ ಮೇಲೆ ಮಾತ್ರ. ನಮ್ಮ ದೃಷ್ಟಿಯಲ್ಲಿ ಶ್ರಮಜೀವಿಗಳೆಲ್ಲರೂ ಒಂದು ಕುಟುಂಬಕ್ಕೆ ಸೇರಿದವರು. ನಾವು ಎದುರಿಸುವುದು ಇಂಗ್ಲಿಷ್, ಜರ್ಮನ್, ಅಮೇರಿಕನ್, ಜಪಾನ್ ಜನತೆಯನ್ನಲ್ಲ; ಜನತೆಯನ್ನು ತುಳಿದು ತನ್ನ ರಕ್ತಪತಾಕೆಯನ್ನು ಹಾರಿಸಿರುವ ಇಂಗ್ಲೆಂಡಿನ ಸಾಮ್ರಾಜ್ಯವಾದ, ಜರ್ಮನಿಯ ನಾಜಿವಾದ, ಅಮೆರಿಕೆಯ ಬಂಡವಾಳವಾದ, ಜಪಾನಿನ ಟೋಜೋವಾದಗಳನ್ನು. ಈ ವಾದಗಳ ಪ್ರಸಾರಕರಾದ ನಮ್ಮ ದೇಶದ ಬಂಡವಾಳಗಾರರು ಸಾಮ್ರಾಜ್ಯಶಾಹಿಗಳು ಅವರ ಕೈಗೊಂಬೆಗಳಾದ ಕವಿಗಳನ್ನು.'

'ಪ್ರಗತಿಶೀಲ ಲೇಖಕರ ಗುರಿಯೆಲ್ಲಾ ಖಂಡನಾತ್ಮಕವಾಯಿತಲ್ಲಾ.'

'ರಚನಾತ್ಮಕವೂ ಆಗಿದೆ. ಮೊದಲು ಭೂಮಿ ಹಸನಾಗಬೇಕು. ಅದಕ್ಕಾಗಿ ಕಳೆ ಕಿತ್ತು, ಕ್ರಿಮಿಕೀಟಗಳನ್ನು ನಿವಾರಿಸಿ ಬೆಳೆಯನ್ನು ಬಿತ್ತಲು ಯತ್ನಿಸುತ್ತಿದ್ದೇವೆ. ಬೆಳೆಯೆಂದರೆ ಮಾನವ-ವಾದ. ನಾವು ಸಾರುವುದು ಮಾನವನ ಅನಂತ, ಅವಿಚ್ಛಿನ್ನ, ವಿಶ್ವತೋಮುಖ ವೈಶಿಷ್ಟ್ಯವನ್ನು. ಪ್ರತಿ ಮಾನವನ ಮನದಲ್ಲಿ ನಡೆಯುತ್ತಿರುವ ದೇವ - ದಾನವ ಘರ್ಷಣೆಯ ಇತಿವೃತ್ತವೇ ನಮ್ಮ ಕಾವ್ಯವಸ್ತು.'

'ಈ ಮಥನದಿಂದ ಹಾಲಾಹಲ ಹುಟ್ಟುವುದಿಲ್ಲವೇ.'

'ಹುಟ್ಟುತ್ತದೆ. ಆದರೆ ಅಮೃತ ಹುಟ್ಟಲೇ ಬೇಕು. ಒಂದು ದೇಶದ ಅನಂತ ಕಲ್ಯಾಣಕ್ಕೆ ಹಲವರ ಬಲಿದಾನವಾದರೇನು? ಸ್ವಾತಂತ್ರ್ಯದೇವಿಗೆ ನಾವು ಲಜಪತಿರಾಯ್, ಮೋತಿಲಾಲ ನೆಹ್ರೂ, ಗಣೇಶ ಶಂಕರ ವಿದ್ಯಾರ್ಥಿ, ಮಹದೇವ ದೇಸಾಯ್, ಕಸ್ತೂರಿಬಾ, ಹಕೀಂ ಅಜ್ಮಲ್ ಖಾನ್, ಡಾ|| ಅನ್ಸಾರಿ, ಕಯ್ಯೂರ ಬಂಧುಗಳು, ಭಗತ್ ಸಿಂಗ್, ದತ್, ಅವರನ್ನು ಬಲಿದಾನವಾಗಿ ಅರ್ಪಿಸಿದ್ದೇವೆ. ಈ ಮಹಾಯಜ್ಞದಲ್ಲಿ ಇನ್ನೂ ಯಾರು ಯಾರು ಅರ್ಪಿತವಾಗಬೇಕೊ? ಇದಕ್ಕೆ ನಾವು ಅಂಜುವುದಿಲ್ಲ, ಅಳುಕುವುದಿಲ್ಲ, ದುರ್ಬಲ ಕಣ್ಣೀರನ್ನೂ ಕರೆಯುವುದಿಲ್ಲ. ಸತ್ತವರಿಗೆ ನಾವು ಅಳುವುದಿಲ್ಲ. ಏಕೆಂದರೆ ನಮ್ಮ ಭಾಗಕ್ಕೆ ಅವರು ಎಂದಿಗೂ ಸತ್ತಿಲ್ಲ. ನಮ್ಮ ಸ್ವಾತಂತ್ರ್ಯಮಂದಿರಕ್ಕೆ ಅವರೇ ಬುನಾದಿ. ಅತಿ ಶಕ್ತಿ ಭಕ್ತಿ ತುಂಬಿದ ನಮ್ಮ ಹೃದಯ ಹುತಾತ್ಮರಿಗೆ ತನ್ನ ಪ್ರಶಾಂತ ಪ್ರಣಾಮವನ್ನರ್ಪಿಸುತ್ತದೆ.'

'ನೀವು ಸಾಹಿತ್ಯವನ್ನು ಸಂಪೂರ್ಣವಾಗಿ ರಾಜ್ಯಕಾರಣದ ವಶವರ್ತಿ ಮಾಡುತ್ತಿದ್ದೀರಿ.'

'ಪ್ರಗತಿಶೀಲರ ಮೇಲೆ ಇದೊಂದು ದೊಡ್ಡ ಆಪಾದನೆ. ಸಾಹಿತ್ಯ, ರಾಜಕಾರಣ ಭಿನ್ನ ಭಿನ್ನ ವಸ್ತುಗಳಲ್ಲ. ಪ್ರತಿಯೊಬ್ಬ ಮಹಾಕವಿಯ ಕೃತಿಯೂ ಅವನ ರಾಜಕಾರಣದ ವೃತ್ತವೇ ಆಗಿದೆ. ಎಲಿಜಬೆತ್ ಕಾಲದ ಇಂಗ್ಲೆಂಡಿನ ಇತಿಹಾಸ ಬರೆಯುವಷ್ಟು ಷೇಕ್ಸ್‌ಪಿಯರ್ ಕವಿಯ ನಾಟಕಗಳಲ್ಲಿ ವಸ್ತು ಅಡಕವಾಗಿದೆ. ಪಂಪ ರನ್ನರ ಕಾವ್ಯ, ಪುರಾಣಗಳಲ್ಲಿಯೂ ಇದೇ ಧ್ವನಿ. ಜೀವಂತ ಸಮಸ್ಯೆಗಳನ್ನು ಎದುರಿಸಲು ಹಿಂಜರಿಯುವವರು ಸಾಹಿತ್ಯ ಶುದ್ಧವಾಗಿರಬೇಕೆಂದೂ ಸಮಾಜ, ರಾಜಕಾರಣ, ಕಲಾತತ್ವಗಳನ್ನು ಸಾರಕೂಡದೆಂದೂ ವಿಧಿಸುತ್ತಾರೆ. ಸಾಹಿತ್ಯದ ಗುರಿಯೂ ಮಾನವಕಲ್ಯಾಣ, ರಾಜಕಾರಣದ ಗುರಿಯೂ ಅದೇ. ಅವು ಒಂದನ್ನೊಂದು ಬಿಟ್ಟಿರಲು ಹೇಗೆ ಸಾಧ್ಯ.'

'ರಾಜಕಾರಣದಲ್ಲಿಯೂ 'ಕಮ್ಯುನಿಷ್ಟ' ಪಂಗಡಕ್ಕೆ ಪ್ರಗತಿಶೀಲ ಲೇಖಕರ ಸಂಘ ಮೀಸಲಾಗಿದೆ ಎಂದು ಆಪಾದನೆ.'

'ತಪ್ಪು ಮಾತು, ಪ್ರಗತಿಶೀಲ ಲೇಖಕರ ಸಂಘದ ಸ್ಥಾಪಕರಾದ ಶ್ರೀ

ಸಜ್ಜದ್ ಜಾಹೀರರವರೂ, ಮುಖಂಡರಲ್ಲಿ ಒಬ್ಬರಾದ ಶ್ರೀ ಡಾಂಗೆಯವರೂ ಕಮ್ಯುನಿಷ್ಟರು ನಿಜ. ಆದರೆ ಅವರು ಉರ್ದು, ಮರಾಠಿಗಳಲ್ಲಿ ಉತ್ತಮ ಲೇಖಕರೂ, ವಾಗ್ಮಿಗಳೂ ಆಗಿದ್ದಾರೆ. ಪ್ರ. ಶೀ. ಲೇ. ಸಂಘದಲ್ಲಿ ಎಲ್ಲ ರಾಜಕೀಯ ಪಕ್ಷಗಳಿಗೆ ಸೇರಿದವರೂ ಇದ್ದಾರೆ. ಕಮ್ಯುನಿಷ್ಟರೂ ಇದ್ದಾರೆ. ಯಾವ ಪಕ್ಷಕ್ಕೂ ಸೇರದಿರುವ ಅಬ್ಬಾಸ್, ಜಾಗಿರ್‌ದಾರ್, ಇನಾಂದಾರ್, ಕೃಷ್ಣಕುಮಾರ್, ನಾನೂ ಇದ್ದೇವೆ. ಕಮ್ಯುನಿಷ್ಟರಿದ್ದಾರೆಂದು ಅದನ್ನು ಕಮ್ಯುನಿಷ್ಟ್ ಪಾರ್ಟಿಯ ಅಂಗವೆಂದು ಕರೆಯುವವರು ಮುಸಲ್ಮಾನರು ಇದ್ದಾರೆಂದು ಮುಸ್ಲಿಮ್ ಲೀಗಿನ ಮರಿ ಎಂದೂ ಹೇಳಬಹುದಲ್ಲಾ.'

'ತಮ್ಮ ಕೀರ್ತಿ ಬೆಳೆಸಲು ಕೆಲವು ಲೇಖಕರು ಹೂಡಿದ ಹಂಚಿಕೆ ಇದು ಎಂದು ಅಪಾದನೆಯಿದೆಯಲ್ಲಾ.'

'ನಮ್ಮಲ್ಲಿ ಯಾರಿಗೆ ಕೀರ್ತಿ ಬೇಕಾಗಿದೆ ಹೇಳಿ. ಈಗ ಪ್ರಗತಿಶೀಲ ಲೇಖಕ ಸಂಘದ ಮುಂದಾಳುಗಳಾಗಿರುವ ನಾವು ಯಾರೂ ಕೀರ್ತಿವಿಹೀನರಲ್ಲ. ಇದರಿಂದ ಹೊಸದಾಗಿ ನಾವು ಕೀರ್ತಿಯನ್ನು ದೊರಕಿಸಿಕೊಳ್ಳಬೇಕಾಗಿಲ್ಲ. ನಮ್ಮ ಜೀವನದ ಸಾರ್ಥಕ್ಯ ಹೇಗೆ ಎಂಬುದರ ಕಡೆಗೆ ನಮ್ಮ ಲಕ್ಷ್ಯ. ನಮ್ಮ ದೇಶದ ದಲಿತ ವರ್ಗವನ್ನು ನಿರ್ಲಕ್ಷಿಸುವುದು ನಮಗೆ ಶ್ರೇಯಸ್ಕರವಲ್ಲ ಎಂಬುದೇ ನಾವು ಮನವರಿತಿರುವ ಸತ್ಯ.'

'ಲೈಂಗಿಕ ವಿಷಯಗಳ ಮೇಲೆ ಪ್ರಗತಿಶೀಲ ಲೇಖಕರ ಅಭಿಪ್ರಾಯವೇನು.'

'ಲೈಂಗಿಕ ವಿಚಾರಗಳ ಬಗ್ಗೆ ಇರುವ ವಿಚಾರಹೀನ ದೃಷ್ಟಿ, ರಸೋದ್ರಿಕ್ತ ಪ್ರದರ್ಶನ, ನಿಸರ್ಗಶೂನ್ಯತೆಗಳನ್ನು ನಾವು ಎದುರಿಸುತ್ತೇವೆ. ಆಹಾರ, ನಿದ್ರಾ, ಭಯ, ಮೈಥುನಗಳು ನಾಲ್ಕೂ ಮನುಷ್ಯನ ಬೆಳವಣಿಗೆಗೆ ಅವಶ್ಯಕವಾಗಿ ಬೇಕಾದ ವಿಷಯುಗಳು. ಬ್ರಹ್ಮಚರ್ಯ, ಸನ್ಯಾಸವನ್ನು ಬೋಧಿಸಿಕೊಂಡು ನಾವು ನಿಸರ್ಗಕ್ಕೆ ಅಪಮಾನವನ್ನೂ ಮಾಡಬಯಸುವುದಿಲ್ಲ. ಮಾನವನ ವಿಕಾಸಕ್ಕೆ ಲಿಂಗ (sex) ಅತ್ಯವಶ್ಯಕವಾದ ವಸ್ತು. ಅದನ್ನು ವಿಚಾರ ದೃಷ್ಟಿಯಿಂದ ನೋಡುತ್ತೇವೆ. ಅದರ ಬಗ್ಗೆ ಮುಚ್ಚುಮರೆ ಮಾಡಿ ತೆರೆಯ ಮರೆಯಲ್ಲಿ ಕೂಪಗಳನ್ನು ಕಟ್ಟುವುದು ನಮಗೆ ಒಪ್ಪದು. ಲಿಂಗವಿಜ್ಞಾನ ಸಾರ್ವತ್ರಿಕವಾಗಿ ಪ್ರಚಾರವಾಗಬೇಕು. ಜನ ಸುಳ್ಳು ನಾಚಿಕೆ, ಮರ್ಯಾದೆ

ಗಳನ್ನು ಬಿಟ್ಟು ಅವನ್ನು ಚರ್ಚಿಸಬೇಕು. ಶಾಸ್ತ್ರ ಗ್ರಂಥಗಳ ಮೂಲಕ ಭಾರದ್ವಾಜರು, ಗೋಪಾಲಕೃಷ್ಣರು, ವೆಂಕಟಗಿರಿರಾಯರು ಈ ತತ್ವವನ್ನು ಪ್ರತಿಪಾದಿಸಿದ್ದಾರೆ. ಕ್ರಿಯಾಸಾಹಿತ್ಯದಲ್ಲಿ ನಾನು ಪ್ರತಿಪಾದಿಸಿದ್ದೇನೆ.'

'ಇಂತಹ ಚರ್ಚೆಯಿಂದ ಸಮಾಜದ ನೀತಿ ಕೆಡುವುದಿಲ್ಲವೆ.'

'ಸಮಾಜದಲ್ಲಿರುವ ರೋಗರುಜಿನಾದಿಗಳನ್ನು ನಾವೂ ಮುಚ್ಚಿಡುತ್ತ ಬಂದು ಅದು ಕೊಳೆತು ನಾರಿ ಹಾಳಾಗಲು ಅವಕಾಶ ಕೊಡಬೇಕೇ? ಕಾಲೋಚಿತ ಚಿಕಿತ್ಸೆಯಿಂದ ಈ ವ್ಯಾಧಿಯನ್ನು ಗುಣಪಡಿಸಿ ಸಮಾಜವನ್ನು ಸಂಪುಷ್ಟ ಸುದೃಢ ಮಾಡುವುದು ಒಳ್ಳೆಯದೋ? ನಮ್ಮ ಜೀವನ, ಸಂವೇದನೆ, ವಿಚಾರಗಳ ಮೇಲೆ ಬಿದ್ದಿರುವ ಅವಕುಂಠನವನ್ನು ಹರಿದೊಗೆಯಬೇಕು.'

'ಪ್ರಗತಿಶೀಲ ಲೇಖಕರ ತತ್ವಗಳನ್ನು ಕ್ರೋಢೀಕರಿಸಿ ನಾಲ್ಕು ಮಾತುಗಳಲ್ಲಿ ಸೂಚಿಸುವಿರಾ.'

'ಪ್ರಗತಿಶೀಲ ಲೇಖಕರ ಗುರಿ ಹಿಂದೂಸ್ಥಾನದ ಸ್ವಾತಂತ್ರ್ಯ ಸಮರದಲ್ಲಿ ನೆರವಾಗುವುದು. ಸ್ವಾತಂತ್ರ್ಯ ಭಾವನೆಯನ್ನು ಭಾರತೀಯರ ಮನದಲ್ಲಿ ಬಿತ್ತುತ್ತಲು ತಮ್ಮ ಲೇಖನಿಯನ್ನು ಅದಕ್ಕಾಗಿ ಮಿಸಲು ಮಾಡುವುದು. ಸ್ವಾತಂತ್ರ್ಯ ದೊರೆತ ಮೇಲೆ ಅದರ ಸಂರಕ್ಷಣೆಗೆ ನೆರವಾಗುವುದು.

ಹಿಂದೂಸ್ಥಾನದ ಸ್ವಾತಂತ್ರೇಚ್ಛೆಯನ್ನು ವಿರೋಧಿಸುವ ವ್ಯಕ್ತಿ, ಸಂಸ್ಥೆ, ಧೋರಣೆಗಳನ್ನು ಪ್ರ. ಶೀ. ಲೇ. ಸಂಘವು ತೀವ್ರವಾಗಿ ವಿರೋಧಿಸುತ್ತದೆ.

ಪರಂಪರಾಗತವಾದ ಪೌರಾಣಿಕ ಸಾಹಿತ್ಯ, ಧಾರ್ಮಿಕ ಚರ್ವಿತಚರ್ವಣಗಳಿಂದ ನಮ್ಮ ನಾಡಿನ ಪ್ರಗತಿ ಹಿಂದೆ ಬಿದ್ದಿದೆ. ಸಂಪ್ರದಾಯದ ಕೈಗೆ ಸಿಕ್ಕಿ ನರಳುತ್ತಿರುವ ನಮ್ಮ ಸಾಹಿತ್ಯ, ಕಲೆಗಳನ್ನು ಅದರ ಬಂಧನದಿಂದ ಪಾರು ಮಾಡುವುದು.

ಬಂಡವಾಳಶಾಹಿ (capitalism) ಸಾಮ್ರಾಜ್ಯಶಾಹಿ (Imperialism) ಮತ್ತು ಫಾಸಿಸಂ, ನಾಜಿಜಂಗಳನ್ನೂ ಪ್ರ. ಶೀ. ಲೇ. ಸಂಘ ತೀವ್ರವಾಗಿ ವಿರೋಧಿಸುತ್ತದೆ.

ಹಿಂದೂಸ್ಥಾನದಲ್ಲಿ ಸಮಾನಧರ್ಮ, ಸಮಾನಜೀವನಗಳಿಗೆ, ಅವಕಾಶವಾಗಲು ಪ್ರ. ಶೀ. ಲೇ. ಸಂಘ ಹೆಣಗುತ್ತದೆ.

ಹಿಂದೂಸ್ಥಾನವನ್ನು ಹರಿದು ಹೋಳುಮಾಡುತ್ತಿರುವ ಹಿಂದೂ-ಮುಸ್ಲಿಮ, ಬ್ರಾಹ್ಮಣ-ಬ್ರಾಹ್ಮಣೇತರ, ಆರ್ಯ-ದ್ರಾವಿಡ ಘರ್ಷಣೆಗಳನ್ನೂ ಅದರ ಉದ್ರೇಕಗಾರರನ್ನೂ ಪ್ರ. ಶೀ. ಲೇ. ಸಂಘವು ವಿರೋಧಿಸಿ ಪ್ರತಿಭಟಿಸಲು ಸಿದ್ಧವಾಗಿದೆ.

ಸಾಹಿತ್ಯ, ಕಲೆ, ಜೀವನಗಳಲ್ಲಿ ವೈಜ್ಞಾನಿಕ ಮನೋಭಾವ (Scientific attitude) ಬೆಳೆದು ಹಿಂದೂಸ್ಥಾನವೂ ಜಗತ್ತಿನ ಹಿರಿಯ ರಾಷ್ಟ್ರಗಳಲ್ಲಿ ಒಂದಾಗಿ ತಲೆಯೆತ್ತಿ ನಿಲ್ಲಲು ಪ್ರ. ಶೀ. ಲೇ. ಸಂಘ ದುಡಿಯುತ್ತದೆ.

ಪ್ರ. ಶೀ. ಲೇ. ಸಂಘ ಪ್ರತಿಯೊಂದನ್ನೂ ಶ್ರಮಜೀವಿಗಳ ದೃಷ್ಟಿಕೋನದಲ್ಲಿ ನೋಡುತ್ತದೆ. ಶ್ರಮಜೀವಿಗಳ ಹಿತಸಂರಕ್ಷಣೆಯೇ ನಮ್ಮ ಜೀವಿತ ಧ್ಯೇಯ. ಜಾಕ್ ಕಾನ್‌ರಾಯರು ಅಮೇರಿಕೆಯ ಲೇಖಕರಿಗೆ ಹೇಳಿದ ಮಾತನ್ನೇ ಇಲ್ಲಿ ಉದ್ಧರಿಸಬಹುದು.

'Our task is to vivify the daily struggles, the aspirations, triumphs, despairs of the future masters of life - the workers. This is not easy. Everything is confusing and we have so little in the way of precedent or example, we are hampered by cultural dificiencies, we are harried by the fear of unemployment when working and bodily and mental fatigue. But we have something vital and new to communicate. Our first duty is to attempt an interpretation of those aspects of American life important to the masses, and the next duty is to communicate this material as simply and clearly as we are able to the largest body of readers we can command.'

'ಬಹುಜನರ ವಿರೋಧವನ್ನು ಕಟ್ಟಿಕೊಳ್ಳುವುದಕ್ಕೆ ನೀವು ಬುನಾದಿ ಹಾಕಿದ ಹಾಗೆ ಕಾಣುತ್ತದೆ.'

'ಪ್ರಸಿದ್ಧಿಗೆ ನಮ್ಮ ದಾರಿ ಸುಲಭೋಪಾಯವೆಂದು ಕೆಲವರು ಹೇಳುವು ದನ್ನು ನೀವು ಒಪ್ಪುವುದಿಲ್ಲವೆಂದ ಹಾಗಾಯಿತು.'

'ಈ ಕೆಲಸಕ್ಕೆ ಯಾರ ಸಹಕಾರವನ್ನು ನೀವು ನಿರೀಕ್ಷಿಸುತ್ತೀರಿ.'

'ನಾಡಿನ ಸಹಕಾರ. ಹೆಚ್ಚಾಗಿ ಶ್ರಮಜೀವಿಗಳು ಮತ್ತು ತರುಣರ ಸಹಕಾರ. ನನ್ನ ವಿದ್ಯಾರ್ಥಿ ಮಿತ್ರರ ಮೇಲೆ ನಾನು ತುಂಬ ನಂಬಿಕೆಯಿಟ್ಟಿ ದ್ದೇನೆ. ಅವರ ಸಂಪೂರ್ಣ ಸಹಕಾರವನ್ನು ಕೋರುತ್ತೇನೆ.'

'ನಿಮ್ಮ ಕೆಲಸಕ್ಕೆ ಸಂಪೂರ್ಣ ಯಶಃವನ್ನು ಕೋರುತ್ತೇನೆ.'

'ಬರೀ ಯಶಃವನ್ನು ಕೋರಬೇಡಿ. ಹೋದ ಹೋದ ಕಡೆ ನಮ್ಮ ತತ್ವಗಳನ್ನು ಪ್ರಚಾರಮಾಡಿ.'

ಎಂದು ಹೇಳಿದರು. ಆಗಲೆಂದು ಸಂತೋಷದಿಂದೊಪ್ಪಿ ಬೀಳ್ಕೊಂಡೆ.

——::——

# ವಿದ್ಯಾರ್ಥಿಗಳು

ದಿನದಿನಕ್ಕೆ ವಿದ್ಯಾರ್ಥಿಗಳ ಪ್ರಶ್ನೆ ಪ್ರಬಲ ಸ್ವರೂಪದಿಂದ ಜನತೆಯ ಮುಂದೆ ಬಂದು ನಿಲ್ಲುತ್ತಿದೆ. ದೇಶದ ಮುಖಂಡರು ತಮತಮಗೆ ತಿಳಿದಂತೆ ಸಲಹೆ, ಸೂಚನೆಗಳನ್ನು ಕೊಡುತ್ತಿದ್ದಾರೆ. ಯಾವಜ್ಜೀವವೂ ವಿದ್ಯಾರ್ಥಿಗಳಾದ ಶ್ರೀ ಕೃಷ್ಣರಾಯರ ಅಭಿಪ್ರಾಯ ಈ ವಿಷಯದಲ್ಲಿ ನನಗೂ ವಿದ್ಯಾರ್ಥಿವರ್ಗಕ್ಕೂ ಪ್ರಯೋಜನವಾಗಬಹುದೆಂದು ಅವರಲ್ಲಿ ಚರ್ಚಿಸಲು ನಿರ್ಧರಿಸಿದೆ.

ರಾಯರನ್ನು ಕಾಣಲು ನೇರ ಅವರ ಅಭ್ಯಾಸಕೋಣೆಗೇ ನಡೆದೆ. ಬಾಯಲ್ಲಿ ಸಿಗರೇಟು, ಮೇಜಿನ ತುಂಬ ಅಚ್ಚಿನಾಲಯದ ತಪ್ಪೋಲೆಗಳನ್ನಿಟ್ಟುಕೊಂಡು ಕಾರ್ಯಮಗ್ನರಾಗಿದ್ದರು. ಅವರ ಏಕಾಗ್ರತೆಯನ್ನು ಕಂಡು ಈಗೇಕೆ ಬಂದೆ ಎನಿಸಿತು. ಸದ್ದುಮಾಡದೆ ಹಿಂದಿರುಗೋಣವೆಂದುಕೊಳ್ಳುವಷ್ಟರಲ್ಲಿ ಅದೇ ಚಿರಪರಿಚಿತ ಸ್ನೇಹ ಸುಸ್ವರದಲ್ಲಿ

'ಬನ್ನಿ. ಮುದ್ರಾರಾಕ್ಷಸನನ್ನು ಕಂಡು ಅಂಜಿ ಹೋಗುತ್ತಿದ್ದೀರೇನು.'

'ಇಲ್ಲ. ನಿಮಗೆ ತೊಂದರೆ ಕೊಡಬಾರದೆಂದು.'

'ನನಗೆ ಬೇಕಾದುದು ನಿಮ್ಮಂತಹ ತೊಂದರೆ ಕೊಡುವ ಜನ. ಎಷ್ಟು ದೂರದಿಂದ, ಎಷ್ಟು ಶ್ರಮವಹಿಸಿ, ಈ ಬಿಸಿಲಿನಲ್ಲಿಯೂ ಬಂದಿದ್ದೀರಿ. ನಿಮ್ಮೊಂದಿಗೆ ನಾಲ್ಕು ಮಾತುಗಳನ್ನಾಡುವುದಕ್ಕೆ ನನಗೆ ತೊಂದರೆಯೇ. ಅದೆಲ್ಲಾ ದೊಡ್ಡವರು ಹಾಕುವ ಸೋಗು. ಒಳಗೆ ಹೊತ್ತು ಹೋಗದೆ ಗೀಟು ಆಟವನ್ನು ಆಡುತ್ತ ಕುಳಿತಿರುತ್ತಾರೆ. ನೋಡಲು ಯಾರಾದರೂ ಬಂದರೆ ಈಗ ಪುರುಸೊತ್ತಿಲ್ಲ ಎಂದು ಹೇಳಿ ಕಳುಹಿಸುತ್ತಾರೆ.'

ಆರಾಮಾಸನದ ಮೇಲೆ ಕುಳಿತೆ. ರಾಯರು ತಪ್ಪೋಲೆಗಳನ್ನು ತಿದ್ದುತ್ತಲೇ

'ನನಗೆ ಎರಡು ಕೆಲಸ ಮಾಡುವುದಕ್ಕೆ ತಲೆಬೇಸರ ನೋಡಿ.'

'ಯಾವಯಾವವು.'

'ಒಂದು ನನ್ನ ಹಸ್ತಪ್ರತಿಗಳನ್ನು ಪ್ರತಿಮಾಡುವುದು, ಎರಡು ನನ್ನ ಪುಸ್ತಕಗಳ ತಪ್ಪೋಲೆಗಳನ್ನು ಓದುವುದು.'

'ನೀವು ಓದದಿದ್ದರೆ ಮುದ್ರಣ ತಪ್ಪುಗಳು ಹೇರಳವಾಗಿ ಉಳಿದು ಬಿಡುತ್ತವೆ.'

'ನಾವು ಓದಿದರೂ ಅಷ್ಟೇ. ಕೆಲವು ಸಲ ನಮ್ಮ ಮುದ್ರಕರು ಇತ್ತ ನಮಗೆ ತಪ್ಪೋಲೆಗಳನ್ನು ಕಳುಹಿಸಿ ಅತ್ತ ತಾವು ಫಾರ್ಮು ಪ್ರಿಂಟ್ ಮಾಡ ಲಾರಂಭಿಸುತ್ತಾರೆ. ನಮ್ಮಲ್ಲಿ ಎಲ್ಲಿ ನೋಡಿದರೂ ಸಿಸ್ತಿನ, ಅಚ್ಚುಕಟ್ಟುತನದ ದಟ್ಟ ದಾರಿದ್ರ್ಯ. ಅದಕ್ಕೇ ಶ್ರೀ ಕೃಷ್ಣ ನಮಗೆ ಹೇಳಿದ್ದು 'ಯೋಗಃ ಕರ್ಮಸು ಕೌಶಲಂ' ಎಂದು.

'ವಿದ್ಯಾರ್ಥಿಗಳ ಬಗ್ಗೆ ನಾಲ್ಕು ಮಾತನಾಡಬೇಕೆಂದು ಆಸೆಯಾಯಿತು ಬಂದೆ.'

'ಆಗಲಿ.'

'ನಿಮ್ಮ ವಿದ್ಯಾರ್ಥಿದೆಸೆ ಎಲ್ಲಿಗೆ ಮುಗಿಯಿತು.'

'ಅದರ ಕಥೆಯನ್ನೆಲ್ಲಾ ನನ್ನ ಆತ್ಮಕಥೆಯಲ್ಲಿ ಹೇಳುತ್ತೇನೆ. ಈಗ ಬೇಡ.'

'ನೀವು ಆತ್ಮಕಥೆಯನ್ನು ಬರೆಯುವಿರಾ.'

'ಖಂಡಿತವಾಗಿ.'

'ಯಾವಾಗ.'

'ಪ್ರಾಯಶಃ ಇದೇ ವರ್ಷ, ತಪ್ಪಿದರೆ ಮುಂದಿನ ವರ್ಷ.'

'ಇದೊಂದು ಸಂತೋಷದ ಸುದ್ದಿ.'

'ತಡೆಯಿರಿ. ಅವಸರದಲ್ಲಿ ನಿಮ್ಮ ಅಭಿಪ್ರಾಯವನ್ನು ಸೂಚಿಸಿ ಬಿಡಬೇಡಿ. ನನ್ನ ಆತ್ಮಕಥೆಯನ್ನು ನೋಡಿ ಎಷ್ಟು ಜನಕ್ಕೆ ಆಪ್ಯಾಯಮಾನ ವಾಗುವುದೊ ಮುಂದೆ ನೋಡೋಣ.'

'ಅದೂ ಒಂದು ಉಗ್ರ-ಗೀತೆಯೇನು.'

'ಹೌದು. ಉಗ್ರ ಗೀತೆಯಲ್ಲಿ ಕೃಷ್ಣ ಉವಾಚ. ನಾವೆಲ್ಲಾ ಮೊದ ಮೊದಲು ರವೀಂದ್ರರ 'ಅಂಚೆಯ ಮನೆ' ನಾಟಕದ ಅಮಾಲನ ಹಾಗಿರುತ್ತೇವೆ. ಜೀವನದಲ್ಲಿ ಏನನ್ನು ಕಂಡರೂ ನಮ್ಮ ಹೃದಯ ಅರಳುತ್ತದೆ. ಬರಬರುತ್ತ,

ಲೋಕವ್ಯಾಪಾರವನ್ನು ತಿಳಿಯುತ್ತ, ಅನುಭವದ ಮುಳ್ಳುಹಾದಿಯಲ್ಲಿ ನಡೆಯುತ್ತ ರೊಮೇರೋಲಾ ಅವರ 'ಜೀನ್ ಕ್ರಿಸ್ಟೊಫೆ'ಯಂತಾಗುತ್ತೇವೆ. ಎಲ್ಲದರ ಮೇಲೆ ಖಡ್ಗಯೆತ್ತುವ ಕ್ಷಾತ್ರ ಕೆರಳುತ್ತದೆ.'

'ಆದರೆ ನೀವು ನಿರಾಶಾವಾದಿಗಳಲ್ಲವಲ್ಲಾ.'

'ಎಂದಿಗೂ ಇಲ್ಲ. ಆಶಾವಾದವೇ ನನ್ನ ಬಾಳುವೆಯ ಕ್ರತುಶಕ್ತಿ. ನನ್ನೆಲ್ಲ ಕೆಲಸ ಕಾರ್ಯಗಳ ಮಹಾ ಬೆಳಕು.'

'ಆಶಾವಾದವನ್ನು ಉಳಿಸಿಕೊಳ್ಳುವುದು ಹೇಗೆ.'

'ಜೀವನದಲ್ಲಿ ಒಂದು ಧ್ಯೇಯವನ್ನಿಟ್ಟುಕೊಂಡು ಅದಕ್ಕೆ ತ್ರಿಕರಣವನ್ನು ಮೀಸಲು ಮಾಡುವುದರಿಂದ.'

'ಅನೇಕ ಎಡರು ತೊಡರುಗಳು ಬಂದು ಧ್ಯೇಯವನ್ನು ಹಿಮ್ಮೆಟ್ಟಿಸುವುದಿಲ್ಲವೇ.'

'ಪ್ರತಿಬಂಧಕಕ್ಕೆ ಎಲ್ಲರೂ ಅಂಜಿದರೆ ಇವತ್ತು ಗಾಂಧಿ, ವಿವೇಕಾನಂದ, ಬಸವಣ್ಣ, ಕ್ರಿಸ್ತ, ಪೈಗಂಬರರನ್ನು ಯಾರು ಮಾನಿಸುತ್ತಿದ್ದರು. ಪ್ರತಿಬಂಧಕಗಳನ್ನು ಗೆದ್ದು ಪರಿಸ್ಥಿತಿಯ ಮೇಲೆ ತಲೆಯೆತ್ತಿ ನಿಲ್ಲುವವನೇ ಮಹಾಪುರುಷ.'

'ಎಲ್ಲರಿಗೂ ಅದು ಸಾಧ್ಯವೇ.'

'ಯಾವದು ಗಾಂಧಿ, ಬಸವಣ್ಣ, ವಿವೇಕಾನಂದರಿಗೆ ಸಾಧ್ಯವಾಯಿತೋ ಅದು ನಮಗೂ ಸಾಧ್ಯ. ಅವರೂ ನಮ್ಮ ಹಾಗೆ ಮನುಷ್ಯರು. ಹಿಂದೂಸ್ಥಾನಕ್ಕೆ ಪೂರ್ಣ ಸ್ವಾತಂತ್ರ್ಯ ಬಂದ ಹೊರತೂ ನಾನು ಸಾಯುವುದಿಲ್ಲ ಎಂದು ಗಾಂಧಿಜೀಯವರ ಶಪಥ. ಅವರ ಮಹೋಪವಾಸಗಳ ಚರಿತ್ರೆಗಳನ್ನು ನೀವೂ ಕೇಳಿದ್ದೀರಿ. ಅವರಂತೆ ಉಪವಾಸವ್ರತಗಳನ್ನಾಚರಿಸಿ ನಾವು ಬದುಕುತ್ತಿದ್ದೇವೇ? ಅವರು ಬದುಕಿದರು—ನಾಳೆ ಸ್ವತಂತ್ರ ಹಿಂದೂಸ್ಥಾನದ ಕಣ್ಣಣಿಸುವ ನೋಟವನ್ನು ಮನದಣಿಯ ನೋಡಿಯೂ ನೋಡುತ್ತಾರೆ.'

'ನಿಜವಾಗಿಯೂ ಇದು ಸಾಧ್ಯವೆಂದು ನಂಬುತ್ತೀರಾ.'

'ಮೊನ್ನೆ ತಾನೆ ಲಾರ್ಡ್ ಆಕ್ಲೆಂಡ್‌ರವರು ಹೇಳಿದ್ದನ್ನು ಪತ್ರಿಕೆಗಳಲ್ಲಿ ಓದಲಿಲ್ಲವೇ. 'ಹಿಂದೂಸ್ಥಾನ ಇನ್ನು ಐದು ವರ್ಷಗಳಲ್ಲಿ ಬ್ರಿಟಿಷ್ ಸಾಮ್ರಾಜ್ಯದಿಂದ ದೂರವಾಗುತ್ತದೆ' ಎಂದು ಅವರು ಖಂಡಿತವಾಗಿ ನುಡಿದಿದ್ದಾರೆ. ಇದು

ಗಾಂಧೀಜಿಯವರ ತಪಸ್ಸಿದ್ಧಿಯ ಒಂದು ಅಂಶ ಮಾತ್ರ. ಗಾಂಧೀಜಿಯವರ ಜನ್ಮೋದ್ದೇಶ ಅಲ್ಲಿಗೇ ಮುಗಿಯುವುದಿಲ್ಲ. ಅವರು ಇನ್ನೂ ಒಂದು ಮಹತ್ಕಾರ್ಯವನ್ನು ಆಚರಿಸುತ್ತಾರೆ.'

'ಯಾವದು ಅದು. ನಿಮ್ಮ ನೋಟ ಸ್ವಲ್ಪ ವಿಚಿತ್ರವಾಗಿರುವ ಹಾಗೆ ಕಾಣುತ್ತದೆ.'

'ನನ್ನ ನೋಟವಲ್ಲ ಇದು—ನನ್ನ ಅಂತರಾತ್ಮನ ವಾಣಿ. ಸತ್ಯದ ಉಜ್ವಲ ಸಂದೇಶ. ಪಶ್ಚಿಮದ ಉನ್ಮತ್ತ ರಾಷ್ಟ್ರಗಳು ಈಗ ಯುದ್ಧದಲ್ಲಿ ತೊಡಗಿ ಜಗತ್ತನ್ನು ರಕ್ತಕಾಸಾರವನ್ನಾಗಿ ಮಾಡಿಬಿಟ್ಟಿವೆ. ಶಾಂತಿ, ಅಹಿಂಸೆಯ ಪವಿತ್ರವಾಣಿ ಇಂದಿಗೂ ಆಗಾಖಾನ ಸೆರೆ (ಅರ) ಮನೆಯಿಂದ ಕೇಳಿಸುತ್ತಿದೆ. ಕಾದಿ ಕಾದಿ ಸುಸ್ತಾಗಿ, ಬೆಂಡಾಗಿ, ಬಸವಳಿದು ತಮ್ಮ ವ್ಯವಹಾರವನ್ನು ತಾವೇ ನಿರ್ಣಯಿಸಿಕೊಳ್ಳಲಾಗದ ಪರಿಸ್ಥಿತಿಗೆ ಐರೋಪ್ಯ ಜನಾಂಗಗಳು ನಾಳೆ ಬರುತ್ತವೆ. ಆಗ ಅವರಿಗೂ ಮಾರ್ಗದರ್ಶನ ಮಾಡಿ ಜನಾಂಗಗಳ ಮಹಾಸಭೆಯನ್ನು ಕರೆದು ಜಗತ್ತಿಗೆ ಶಾಂತಿಮಂತ್ರವನ್ನುಪದೇಶಿಸುವವರು ಗಾಂಧೀಜಿಯವರು. ಭಾರತದ ಕಲ್ಯಾಣ ಮಾತ್ರವಲ್ಲ—ಇಡಿಯ ಜಗತ್ತಿನ ಕಲ್ಯಾಣ ಈ ಮಹಾಪುರುಷನಿಂದ ಸಾಧಿಸಲ್ಪಡುತ್ತದೆ. ಆ ದೃಶ್ಯವನ್ನು ನೋಡಲು ನಾವು ಬದುಕಿರಬೇಡವೇ? ಅಂದು ನಮ್ಮ ಬಾಪೂ ನಡೆಯುವ ಹಾದಿಯನ್ನು ನಮ್ಮ ಆತ್ಮಪುಷ್ಪಗಳಿಂದ ಅಲಂಕರಿಸಬೇಡವೇ? ಜಗತ್ತನ್ನು ಉದ್ಧರಿಸಲು ಬರುವ ಈ ವಿಶ್ವಮೂರ್ತಿಗೆ ಸ್ವಾಗತ ಬಯಸಲು ನಮ್ಮ ಸೇವೆ, ತ್ಯಾಗ, ಪ್ರೇಮ, ಭಕ್ತಿಗಳಿಂದ ತಳಿರು ತೋರಣಗಳನ್ನು ನಿರ್ಮಿಸಬೇಡವೇ? ಕವಿಗಳೇ ಏಳಿ—ನಿಮ್ಮ ಜಯಗೀತೆಗಳು ಸಿದ್ಧವಾಗಲಿ; ಗಾಯಕರೇ ಏಳಿ ನಿಮ್ಮ ಕಂಠಗಳು ಅನ್ಯಾದೃಶ್ಯವಾಗಿ ಆ ಮಹಾದಿನದ ಜಯಘೋಷವನ್ನು ಹಾಡಲಿ.'

'ಎಂತಹ ಸುಂದರ ಚಿತ್ರ. ಮಧುರ ಸ್ವಪ್ನವಾಗಬಾರದು.'

'ಎಂದಿಗೂ ಇಲ್ಲ. ನಮ್ಮ ಹುತಾತ್ಮರ, ವೀರರ ಬಲಿದಾನ ನಿರರ್ಥಕವಾಯಿತೆಂದು ಭಾವಿಸುವಿರಾ?'

'ನಮ್ಮ ನಾಡಿನಲ್ಲಿ ನಿಜವಾಗಿಯೂ ಇಷ್ಟು ಗಾಢವಾದ ದೇಶವಾತ್ಸಲ್ಯ ಮೂಡಿದೆಯೇ?'

‘ದಬ್ಬಾಳಿಕೆ ಅದನ್ನು ಅಣಗಿಸಿದೆ ಎಂದು ತಿಳಿದಿದ್ದೀರಾ. ನಮ್ಮ ಹುತಾತ್ಮರು ಚೆಲ್ಲಿರುವ ಒಂದೊಂದು ತೊಟ್ಟು ರಕ್ತದಿಂದ ಅಂತಹ ಸಹಸ್ರಾರು ವೀರ ಸ್ತ್ರೀ ಪುರುಷರು ನಮ್ಮ ದೇಶದಲ್ಲಿ ಹುಟ್ಟಿದ್ದಾರೆ. ಭಾರತದ ಪ್ರತಿಯೊಬ್ಬ ಶ್ರಮಜೀವಿಯೂ ಸ್ವಾತಂತ್ರ್ಯದ ಅಡಿಗಲ್ಲು. ಇಂದು ನಾವು ೩೫೦ ಕೋಟಿ ಮನುಷ್ಯರಲ್ಲ, ೩೫೦ ಕೋಟಿ ದೇವತೆಗಳು, ವೀರರು, ಅತಿಮಾನವರು. ಎಚ್ಚೆತ್ತ ಭಾರತಸಿಂಹವನ್ನು ಎದುರಿಸುವ ಗಂಡೆದೆ ಜಗತ್ತಿನಲ್ಲಿ ಯಾರಿಗಿದೆ.’

‘ಈ ಸ್ವಾತಂತ್ರ್ಯ ಸಮರದಲ್ಲಿ ವಿದ್ಯಾರ್ಥಿಗಳು ತಳೆಯಬೇಕಾದ ಧೋರಣೆಯೇನು.’

‘ಜಗತ್ತಿನ ಅನೇಕ ರಾಷ್ಟ್ರಗಳ ಸ್ವಾತಂತ್ರ್ಯ ಸಂಪಾದನಾ ಇತಿಹಾಸವನ್ನು ಕಟ್ಟಿರುವವರು ವಿದ್ಯಾರ್ಥಿಗಳು. ಗಾಂಧೀಜಿಯವರು ಅಸಹಕಾರ ಚಳುವಳಿಯನ್ನಾರಂಭಿಸಿದಂದಿನಿಂದ ಅದರಲ್ಲಿ ಧುಮ್ಮಿಕ್ಕಿ ತಮ್ಮ ಸಮಸ್ತವನ್ನೂ ವಿದ್ಯಾರ್ಥಿಗಳು ತ್ಯಾಗಮಾಡಿದ್ದಾರೆ. ಸ್ವಾತಂತ್ರ್ಯಸಮರ ಅವರ ಸಮರ. ‘ಸತ್ತರೆ ಸ್ವರ್ಗ, ಗೆದ್ದರೆ ರಾಜ್ಯಭೋಗ’ ಎಂದು ಅರ್ಜುನನಿಗೆ ಶ್ರೀ ಕೃಷ್ಣ ಹೇಳಿದ ಮಾತು ವಿದ್ಯಾರ್ಥಿಗಳಿಗೇ ಅನ್ವಯಿಸುವುದು. ನಾಳೆ ಸ್ವತಂತ್ರ ಭಾರತದ ಸಂಪೂರ್ಣ ಸುಖ ಕೀರ್ತಿ ಅವರ ಪಾಲು.’

‘ಶಾಲೆ ಕಾಲೇಜುಗಳಲ್ಲಿ ವ್ಯಾಸಂಗಮಾಡುವ ವಯಸ್ಸಿನಲ್ಲಿ ಅವರು ರಾಜಕೀಯ ರಣರಂಗಕ್ಕೆ ಧುಮ್ಮಿಕ್ಕಿದರೆ ಅದರಿಂದ ಅವರಿಗೆ ತುಂಬ ಹಾನಿಯಲ್ಲವೇ ?’

‘ಇದೆಂತಹ ವಿದ್ಯಾಭ್ಯಾಸ. ಇದೆಂತಹ ಶಾಲೆ ಕಾಲೇಜುಗಳು. ರಾಬರ್ಟ್ ಇಂಗರ್ಸಾಲ್ ಹೇಳಿದಂತೆ ‘ಕಾಲೇಜುಗಳು ವಜ್ರಗಳನ್ನು ಕಂದಿಸಿ ಕುಂದಿಸಿ, ಹರಳುಗಳಿಗೆ ಮೆರಗು ಕೊಡುವ ಸಂಸ್ಥೆಗಳು, ಅಲ್ಲಿ ಸಿಕ್ಕುವ ಶಿಕ್ಷಣ ಶಿಕ್ಷಣವೇ. ಭಾಷೆ ಬೇರೆ ದೇಶದ್ದು, ವಿಚಾರ ಬೇರೆ ದೇಶದ್ದು. ಕಲಿಯುವ ವಿಷಯಗಳು ಭಾರತಕ್ಕೆ ತೀರಾ ವ್ಯತಿರಿಕ್ತವಾದವು. ಇತಿಹಾಸವೆಂದರೆ ಹಿಂದೂ-ಮುಸ್ಲಿಮರ ಕಲಹ, ಇಂಗ್ಲಿಷರು ಬಂದು ಶಾಂತಿಸ್ಥಾಪನೆ ಮಾಡಿದ ಇತಿಹಾಸ. ಭೂಗೋಳವೆಂದರೆ ಇಂಗ್ಲಿಷರು ಗೆದ್ದ ಪ್ರದೇಶಗಳು, ಸಾಹಿತ್ಯವೆಂದರೆ ಷೇಕ್ಸ್‌ಪಿಯರ್ ಮತ್ತು ಮ್ಯಾಥ್ಯೂ ಆರ್ನಾಲ್ಡರ ಕೀರ್ತಿಪ್ರಲಾಪ. ಅರ್ಥಶಾಸ್ತ್ರವೆಂದರೆ ಹಿಂದೂ

ಸ್ಥಾನಕ್ಕೆ ಇಂಗ್ಲಿಷರು ಎಷ್ಟು ಚೆನ್ನಾಗಿ ತಿಪಟೂರು ಬೆಳ್ಳಿಯ ಬಟ್ಟಲು ಕೊಟ್ಟ ರೆಂಬುದರ ಕಥೆ, ಮನಃಶಾಸ್ತ್ರವೆಂದರೆ ನಮ್ಮಲ್ಲಿ ಚಿತ್ತದಾಸ್ಯ ಮೂಡಲು ಇಂಗ್ಲಿಷರು ಹೂಡಿದ ಹವಣಿಕೆ, ಕಲೆಯೆಂದರೆ ಮೂರು ತಲೆ, ಆರು ಕೈ ಭೂತಗಳನ್ನು ಹಿಂದುಗಳು ಪೂಜಿಸುವ ಮೌಢ್ಯ. ನಮ್ಮ ವಿದ್ಯಾರ್ಥಿಗಳು ಕಲಿಯುತ್ತಿರುವುದು ಇದೇ ಪಾಠ. ನಾಳೆ ಅವರು ಇತರರಿಗೆ ಹೇಳುವುದೂ ಇದೇ ಪಾಠ. ಸ್ವಾಮಿ ವಿವೇಕಾನಂದರು ಹೇಳಿದಂತೆ ಮನುಷ್ಯನ ಪೂರ್ಣ ವಿಕಾಸವನ್ನು ಸಾಧಿಸುವ ಶಿಕ್ಷಣ ಸ್ವತಂತ್ರ ಭಾರತದಲ್ಲಿಯೇ ಆರಂಭವಾಗಬೇಕು. ಈ ಶಿಕ್ಷಣವನ್ನು—ಅಂದರೆ ನಮ್ಮನ್ನು ನಿರ್ವೀರ್ಯರನ್ನಾಗಿ ಮಾಡುತ್ತಿರುವ ವಿದ್ಯಾಭ್ಯಾಸವನ್ನು ಬಿಟ್ಟು ಎಂದು ಭಾರತೀಯರು ಪ್ರಜ್ಞಾಮಯರಾಗುತ್ತಾರೋ ಅಂದು ಆಳರಸರ ಶಾಲೆ ಕಾಲೇಜುಗಳ ಮಹತ್ವವನ್ನು ಅವರು ಅರಿಯು ತ್ತಾರೆ.'

'ನಮ್ಮ ಶಾಲೆ ಕಾಲೇಜುಗಳ ವಿದ್ಯಾರ್ಥಿಗಳಲ್ಲಿ ಮೂಡಿರುವ ರಾಜಕೀಯ ಜಾಗೃತಿಗೇನು ಹೇಳುವಿರಿ.'

'ಇದರ ಕೀರ್ತಿ ಶಾಲಾ ಕಾಲೇಜುಗಳ ವ್ಯವಸ್ಥಾಪಕರಿಗೆ ಸೇರಿದ್ದಲ್ಲ. ನಾನು ಬಲ್ಲಂತೆ ಶಾಲಾ ಕಾಲೇಜುಗಳ ಶೌಚಮಂದಿರಗಳ ಗೋಡೆಗಳ ಮೇಲೆ ಹತ್ತು ವರ್ಷಗಳ ಹಿಂದೆ ಅಶ್ಲೀಲ ಶಾಸನಗಳು ಮೆರೆದಾಡುತ್ತಿದ್ದವು. ಈಗ ಅದೇ ಸ್ಥಾನದಲ್ಲಿ 'ಸ್ವಾತಂತ್ರ್ಯ ಇಲ್ಲವೇ ಮರಣ' 'ಭಾರತ ಬಿಟ್ಟು ಹೋಗಿ' 'ಗಾಂಧೀಜಿಯವರನ್ನು ಬಿಡುಗಡೆ ಮಾಡಿ' ಮೊದಲಾದವು ಮೆರೆದಾಡುತ್ತಿವೆ. ಮೊದಲು ಶಾಲಾ ಕಾಲೇಜುಗಳ ಸಂಘಗಳು ಕೋಮುವಾರು ಭಾವನೆಯ ಅಖಾಡಾಗಳಾಗಿದ್ದವು. ಯೂನಿಯನ್ ಎಲೆಕ್ಷನ್ನಿಗೆ ವಿದ್ಯಾರ್ಥಿಗಳು ತಮ್ಮ ಜಾತಿಯನ್ನು ಮುಂದೆ ಮಾಡಿ ನಿಲ್ಲುತ್ತಿದ್ದರು. ಈಗ ರಾಜಕೀಯ ಪಕ್ಷವನ್ನು ಮುಂದೆ ಮಾಡುತ್ತಿದ್ದಾರೆ. ತಾವು ಬ್ರಾಹ್ಮಣ, ವೀರಶೈವ, ಒಕ್ಕಲಿಗ, ಮುಸ ಲ್ಮಾನರು ಎಂಬುದನ್ನು ಮರೆತು ವಿದ್ಯಾರ್ಥಿಗಳು ಕಮ್ಯುನಿಸ್ಟ್, ರಾಯಿಸ್ಟ್, ಮುಸ್ಲಿಮ್ ಲೀಗರ್, ಹಿಂದೂ ಮಹಾಸಭಾ, ಕಾಂಗ್ರೆಸ್ ಪಕ್ಷದವರು ಎಂದು ಹೇಳಿಕೊಳ್ಳುತ್ತಾರೆ. ಈ ಪಕ್ಷಭಾವನೆ ಅವರಲ್ಲಿ ತೊಲಗಬೇಕು. ವಿದ್ಯಾರ್ಥಿ ಗಳು ಕಮ್ಯುನಿಸ್ಟರಾಗಲಿ ರಾಯಿಸ್ಟರಾಗಲೀ ಆಗಲು ಸಾಧ್ಯವಿಲ್ಲ. ಅವರು

ವಿದ್ಯಾರ್ಥಿಗಳು–ತರುಣರು–ಭಾರತೀಯರು. ಜಾತಿ, ಮತವಾಗಲಿ ರಾಜಕೀಯ ಪಕ್ಷ ವಿಪಕ್ಷಗಳೇ ಆಗಲಿ ವಿದ್ಯಾರ್ಥಿಗಳ ಸ್ವಾತಂತ್ರ್ಯ ಭಾವನೆಯನ್ನೂ ಸಮ ದರ್ಶಿತ್ವವನ್ನೂ ಸಹೋದರತೆಯನ್ನೂ ಹಾಳುಮಾಡಬಾರದು.'

'ಇದಕ್ಕೆ ತಕ್ಕ ವ್ಯಾಸಂಗ ಸಿದ್ಧತೆ ಬೇಕಲ್ಲಾ.'

'ಅವಶ್ಯವಾಗಿ ಬೇಕು.'

'ಅದನ್ನು ನಮ್ಮ ವಿದ್ಯಾರ್ಥಿಗಳು ಮಾಡಿಕೊಳ್ಳುತ್ತಿದ್ದಾರೆಯೇ.'

'ಇಲ್ಲವೆಂದು ಬಹಳ ದುಃಖದಿಂದ ಹೇಳಬೇಕಾಗಿದೆ. ವೃತ್ತಪತ್ರಿಕೆಯನ್ನೂ ನಮ್ಮ ವಿದ್ಯಾರ್ಥಿಗಳು ಸರಿಯಾಗಿ ಓದುವುದಿಲ್ಲ. ಬಾಯಿಂದ ಬಾಯಿಗೆ ಬೀಳುವ ಸುದ್ದಿಗಳು, ನಾಯಕರೆನಿಸಿಕೊಂಡವರ ಭಾಷಣಗಳಲ್ಲಿ ಸಿಕ್ಕುವ ವಿಷಯಗಳು ಇವೇ ಅವರ ಸಾಧನ. ಶ್ರೀಮಾನ್ ಡಿ. ವಿ. ಗುಂಡಪ್ಪನವರು ಕರ್ನಾಟಕ ಸಂಘದ ಬೆಳ್ಳಿಯ ಹಬ್ಬದ ಸಂದರ್ಭದಲ್ಲಿ ಹೇಳಿದ ಮಾತುಗಳನ್ನು ವಿದ್ಯಾರ್ಥಿಗಳು ಪಾರಾಯಣಮಾಡಬೇಕು.'

'ಕನ್ನಡ ಸಾಹಿತ್ಯ ನಿರ್ಮಾಣಕ್ಕೆ ದೀಕ್ಷೆ ತೊಡಬೇಕೆನ್ನುವವರು ನಾಲ್ಕು ತೆರನಾದ ಸಾಧನ ಸಂಪತ್ತನ್ನು ಪಡೆದುಕೊಳ್ಳಬೇಕು. ಒಂದನೆಯದು ಭಾಷಾ ಜ್ಞಾನ, ಎರಡನೆಯದು ಶಾಸ್ತ್ರ ಶಿಕ್ಷೆ, ಮೂರನೆಯದು ಲೋಕಸಂಸರ್ಗ, ನಾಲ್ಕನೆಯದು ಜೀವನೋದಾತ್ತತೆ.'

ಇದನ್ನೇ ಸ್ವಲ್ಪ ಹೆಚ್ಚು ಕಡಿಮೆ ಮಾಡಿಕೊಂಡು ಎಲ್ಲ ವಿಷಯಗಳಿಗೂ ಅನ್ವಯಿಸಿಕೊಳ್ಳಬಹುದು. ಆತ್ಮಸಂಸ್ಕಾರದ ನಾಲ್ಕು ಸ್ಥಲಗಳನ್ನು ಗುಂಡಪ್ಪನವರು ನಿರ್ದೇಶಿಸಿದ್ದಾರೆ. ಶಾಸ್ತ್ರ ಶಿಕ್ಷೆ ಅದರ ಉಚಿತ ಪ್ರಯೋಗವಿಲ್ಲದೆ ಯಾವ ಕೆಲಸವೂ ಆಗಲಾರದು. ವಿದ್ಯಾರ್ಥಿ ಸಾಮ್ಯವಾದಿಯಾದಲ್ಲಿ ಮಾರ್ಕ್ಸ್, ಏಂಜಲ್ಸ್ ಅವರ ತತ್ವಜ್ಞಾನ, ಆ ಸಂಬಂಧದ ಸಾಹಿತ್ಯವನ್ನೂ ಸಮಗ್ರವಾಗಿ ಓದಿ ಮನನ ಮಾಡಿಕೊಳ್ಳಬೇಕು. ನಮ್ಮ ದೇಶಕ್ಕೆ--ಜೀವನಕ್ಕೆ ಮಾರ್ಕ್ಸ್‌ವಾದ ಒಗ್ಗುವುದೊ ಇಲ್ಲವೋ ವಿಚಾರಮಾಡಬೇಕು. ಸತತ ಶ್ರಮ, ಸಾಧನ–ತಪಸ್ಸಿಲ್ಲದೆ ಯಾವ ಕೆಲಸವೂ ಆಗುವುದಿಲ್ಲ.'

'ವಿದ್ಯಾರ್ಥಿಗಳಲ್ಲಿ ಆ ಕುಂದು ಕಂಡುಬರುವುದೇ.'

'ನಿಸ್ಸಂದೇಹವಾಗಿ. ಬಂಡವಾಳಗಾರರ ಕೈಬೀಸಣಿಗೆಯಾಗಿ ಶಾಂತಾ

ಆಪ್ಟೆ, ಸುಬ್ಬುಲಕ್ಷ್ಮಿಯಂತಹ ಸಿನೀಮಾ ನಟಿಯರು ಬಂದರೆ ಅವರನ್ನು ವಿದ್ಯಾರ್ಥಿಗಳು ಮೆರಸುವುದರಲ್ಲಿ ಏನರ್ಥ. ಮೊದಲನೆಯ ಸಲ ಸ್ವಾಮಿ ವಿವೇಕಾನಂದರು ಅಮೇರಿಕೆಗೆ ಹೋದಾಗ ಅಲ್ಲಿ ಸಿಕ್ಕಿದ ಸ್ವಾಗತ, ಜನಗಳು ತೋರಿದ ಉತ್ಸಾಹವನ್ನು ಕಂಡು ಬಹಳ ಸಂತೋಷಿಸಿದರು. ಎರಡನೆಯ ಸಲ ಅವರು ಪೋದ ಹೊತ್ತಿಗೇ ಪ್ರಸಿದ್ಧ ಮಲ್ಲಯುದ್ಧಪ್ರವೀಣ ಕಾರ್ಪೆಂಟರ್ ಅಮೇರಿಕೆಗೆ ಹೋದನಂತೆ. ಜನ ಅವನ ಬೆನ್ನುಹತ್ತಿದ್ದರು. ಅದನ್ನು ಕಂಡು ವಿವೇಕಾನಂದರು ಅಮೇರಿಕೆಯ ಜನರ ಚಂಚಲ ಬುದ್ಧಿ, ಕೇವಲ ನವೀನತೆಯ ಆರಾಧನೆಯನ್ನು ಕಂಡು ಸ್ವಾರಸ್ಯವಾಗಿ ಟೀಕೆಮಾಡಿದ್ದಾರೆ. ನೆಹ್ರೂ ಅವರು ಯೂನಿವರ್ಸಿಟಿ ಯೂನಿಯನ್ನಿಗೆ ಹೋದರೂ ಅದೇ ಸ್ವಾಗತ, ಶಾಂತಾ ಆಪ್ಟೆ ಹೋದರೂ ಅದೇ ಸ್ವಾಗತವೆಂದರೆ ವಿವೇಕಾನಂದರ ಟೀಕೆಯ ಪ್ರತಿರೂಪವೇ ಇಲ್ಲಿಯೂ ಇದೆಯೆಂದು ಹೇಳಬೇಕಾಗಿದೆಯಲ್ಲವೇ? ವಿದ್ಯಾರ್ಥಿಗಳ ಅಪರಿಮಿತ ಉತ್ಸಾಹವನ್ನು ನಾನು ಮೆಚ್ಚುತ್ತೇನೆ. ಆದರೆ ಅದಕ್ಕೆ ವಿವೇಚನೆಯ ಪುಟ ಕೊಡಬೇಕೆಂದು ಅವರನ್ನು ಪ್ರಾರ್ಥಿಸುತ್ತೇನೆ.'

'ತಪ್ಪು ಯಾರದು?'

'ಸ್ವಲ್ಪಭಾಗ ವಿದ್ಯಾರ್ಥಿಗಳದ್ದು, ಬಹುಭಾಗ ಅವರ ಶಿಕ್ಷಕರದ್ದು: ಸಿನೀಮಾ ನಟಿಯರನ್ನು ಬರಮಾಡಿಕೊಂಡು ಅವರ ಜತೆ ಕುಳಿತು ಚಹಾ ಕುಡಿದು ಫೋಟೊ ತೆಗೆಸಿಕೊಳ್ಳುವ ಆಸೆ ಹಿರಿಯರಾದ ಶಿಕ್ಷಕರದ್ದು. ತಮ್ಮ ಅಲ್ಪ ಆಸೆಗೆ ಅವರು ವಿದ್ಯಾರ್ಥಿಗಳನ್ನು ಉಪಯೋಗಿಸಿಕೊಳ್ಳುತ್ತಾರೆ. ಆದರೆ ವಿದ್ಯಾರ್ಥಿಗಳು ಶಿಕ್ಷಕರ ವಿಲೋಭನೆಗೆ ಎರವಾಗಬಾರದು. ಯಾರೂ ತಮ್ಮನ್ನು ದುರುಪಯೋಗಪಡಿಸಿಕೊಳ್ಳಲು ಅವಕಾಶ ಕೊಡಬಾರದು. ಎಲೆಕ್ಷನ್ ಕಾಲಗಳಲ್ಲಿ ರಾಜಕೀಯ ಪಂಥಗಳು ಸಿರ್ಜಿಯಿಂದ ವಿದ್ಯಾರ್ಥಿಗಳ ದುರುಪಯೋಗಪಡಿಸಿಕೊಳ್ಳುತ್ತವೆ. ಸರ್ಕಾರದವರು ಮುಂದಗಾಮಿಗಳಾದ ವಿದ್ಯಾರ್ಥಿಗಳನ್ನು ಸ್ಟ್ಯಾಟ್ ಸಂಸ್ಥೆಯ ಪೋಲೀಸ ಉಪಯೋಗಿಸಿಕೊಳ್ಳುತ್ತಾರೆ. ವಿದ್ಯಾರ್ಥಿಗಳು ಧೈರ್ಯವಾಗಿ ಎಲ್ಲ ಬಗೆಯ ದುರುಪಯೋಗವನ್ನೂ ತಡೆಗಟ್ಟಬೇಕು.'

'ಇದು ಸಾಧ್ಯವೇ?'

'ಏಕೆ ಸಾಧ್ಯವಿಲ್ಲ. ವಿದ್ಯಾರ್ಥಿಗಳಲ್ಲಿ ಐಕಮತ್ಯವೊಂದಿದ್ದರೆ ಎಲ್ಲಾ

ಸಾಧ್ಯ. ಎಲ್ಲರೂ ಹೇಳಿದ್ದನ್ನು ಅವರು ಕೇಳಲಿ—ಆದರೆ ತಮ್ಮ ಬುದ್ಧಿಗೆ ಸರಿ ತೋರಿದ್ದನ್ನು ಮಾತ್ರ ಮಾಡಲಿ. ಬಣ್ಣದ ಮಾತುಗಳಿಗೂ, ಸುಳ್ಳು ಆಸೆ ಗಳಿಗೂ ಭ್ರಾಂತರಾಗುವುದು ಬೇಡ.'

'ನಿಮ್ಮ ವಿಚಾರ ನನಗೆ ತುಂಬ ಒಪ್ಪಿಗೆ.'

'ನಿಮ್ಮಂತೆಯೇ ವಿದ್ಯಾರ್ಥಿಗಳೂ ನನ್ನ ವಿಚಾರವಾದವನ್ನು ಒಪ್ಪಿ ನಡೆಯಬೇಕು.'

'ಅಷ್ಟು ಭರವಸೆಯನ್ನು ಅವರಲ್ಲಿ ನಾನಿಟ್ಟಿದ್ದೇನೆ.'

'ನಾನಿಟ್ಟಿಲ್ಲವೆನ್ನುತ್ತೀರಾ. ವಿದ್ಯಾರ್ಥಿಗಳೆಂದರೆ ನನಗೆ ಪಂಚಪ್ರಾಣ. ಅವರ ತಿಳಿಯಾದ ಮನಸ್ಸು ಯಾವಾಗಲೂ ತುಂಗಾತೀರ್ಥದ ಹಾಗಿರ ಬೇಕೆಂಬುದೇ ನನ್ನ ಆಸೆ. ಅದಕ್ಕೇ ಕಟುವಾದರೂ ಸತ್ಯವಾದ ಈ ಮಾತು ಗಳನ್ನು ನಾನಾಡಿರುವುದು.'

'ಅಪ್ಪಣೆಯಾದರೆ ಬರುತ್ತೇನೆ.'

'ಒಳ್ಳೆಯದು.'

ಎಂದರು. ರಾಯರ ಮಾತುಗಳನ್ನು ಮೆಲುಕುಹಾಕುತ್ತ ನಾನು ಅವರ ಕೋಣೆಯಿಂದ ಹೊರಬಿದ್ದೆ.

---

**ಕಂಡದ್ದು ಏಳನೆಯ ಸಲ**

# ಕನ್ನಡ ಮಾಧ್ಯಮ

ಈಚೆಗೆ ನಡೆದ ಮೈಸೂರು ವಿಶ್ವವಿದ್ಯಾನಿಲಯದ ಸೆನೆಟ್ ಸಭೆಯಲ್ಲಿ ೧೯೪೮ರಿಂದ ಮೊದಲಾಗಿ ೧೯೫೩ರ ಹೊತ್ತಿಗೆ ನಮ್ಮ ವಿಶ್ವವಿದ್ಯಾನಿಲಯದ ತರಗತಿಗಳಲ್ಲಿ ಭಾಷೇತರ ವಿಷಯುಗಳಿಗೆ ಕನ್ನಡವೇ ಮಾಧ್ಯಮವಾಗಿರಬೇಕೆಂದು ಶ್ರೀ ಜೆ. ಬಿ. ಮಲ್ಲಾರಾಧ್ಯರು ತಂದ ನಿರ್ಣಯವು ಬಹುಮತದಿಂದ ಒಪ್ಪಿಗೆ ಪಡೆಯಿತು. ಅನೇಕ ವರ್ಷಗಳಿಂದ ಈ ನಿರ್ಣಯ ಸೆನೆಟ್ ಸಭೆಯಲ್ಲಿ ಬರುತ್ತಿದ್ದರೂ ಅದು ಸೆನೆಟ್ ಸಭಿಕರ ಪೂರ್ಣ ಗಮನಕ್ಕೆ ಬಂದಿರಲಿಲ್ಲ. ಕನ್ನಡ ಸಾಹಿತ್ಯ ಸಮ್ಮೇಳನಗಳೂ, ಕನ್ನಡ ಸಾರ್ವಜನಿಕ ಸಭೆಗಳೂ, ಕನ್ನಡ ಸಾಂಸ್ಕೃತಿಕ ಸಂಘಗಳೂ ಮೇಲಿಂದ ಮೇಲೆ ಈ ಬಗ್ಗೆ ನಿರ್ಣಯಗಳನ್ನು ಮಾಡಿ ಸರ್ಕಾರಕ್ಕೂ ವಿಶ್ವವಿದ್ಯಾನಿಲಯಕ್ಕೂ ಕಳುಹಿಸಿಕೊಡುತ್ತಿದ್ದರೂ ಅದು ಯಾವ ಫಲವನ್ನೂ ತಂದಿರಲಿಲ್ಲ. ಕನ್ನಡಿಗರ ಪುಣ್ಯದಿಂದ, ಶ್ರೀ ಮಲ್ಲಾರಾಧ್ಯರ ಸಾಹಸದಿಂದ ನಿರ್ಣಯ ೧೯೪೪ರಲ್ಲಿ ಸೆನೆಟ್‌ನಲ್ಲಿ ಅಂಗೀಕೃತವಾಯಿತು. ಆದರೆ ಅದು ಕಾರ್ಯರಂಗಕ್ಕೆ ಬರಬೇಕಾದರೆ ಮತ್ತೆ ಎರಡು ಎಡರುಗಳನ್ನು ಹಾಯ್ದು ಬರಬೇಕು. ಯೂನಿವರ್ಸಿಟಿ ಕೌನ್ಸಿಲ್‌ನಲ್ಲಿ ಅಂಗೀಕೃತವಾಗಿ ಸರ್ಕಾರದ ಒಪ್ಪಿಗೆಯನ್ನು ಪಡೆದು ಬರಬೇಕು. ಯೂನಿವರ್ಸಿಟಿ ಕೌನ್ಸಿಲ್ ಮತ್ತು ಸರ್ಕಾರಗಳಲ್ಲಿ ವಿರೋಧಿಗಳ ಕೈವಾಡ ನಡೆದು ಬಹುದಿವಸದ ಕನ್ನಡಿಗರ ಆಸೆ ಭಗ್ನವಾಗದಂತೆ ಎಚ್ಚರ ತೆಗೆದುಕೊಳ್ಳಬೇಕಾದುದು ಅಗತ್ಯವಾಗಿದೆ. ಈ ಸಂಬಂಧವಾಗಿ ಶ್ರೀ ಕೃಷ್ಣರಾಯರಲ್ಲಿ ಚರ್ಚಿಸಿ ಅವರ ಅಭಿಪ್ರಾಯಗಳನ್ನು ಸಾರ್ವಜನಿಕರ ಮುಂದಿಡುವುದು ನನ್ನ ಕರ್ತವ್ಯವೆಂದು ಭಾವಿಸಿ ಅವರನ್ನು ಕಾಣಲು ಹೋದೆ.

ರಾಯರು ಚಿಂತಾಮಗ್ನರಾಗಿ ಕುಳಿತಿದ್ದರು. ನನ್ನ ಮುಖ ನೋಡಿದ ಕೂಡಲೆ

‘ಬನ್ನಿ, ಬನ್ನಿ ಹೊತ್ತಿಗೆ ಸರಿಯಾಗಿ ಬಂದಿರಿ.’

'ಏನು ವಿಶೇಷ.'

'ಕನ್ನಡದ ಕೆಲವು ಸಮಸ್ಯೆಗಳನ್ನು ಕುರಿತು ಆಲೋಚಿಸುತ್ತಿದ್ದೆ. ನೀವು ಬಂದದ್ದು ಒಳ್ಳೆಯದಾಯಿತು. ಸ್ವಲ್ಪ ಗಟ್ಟಿಯಾಗಿ ಆಲೋಚಿಸಬಹುದು.— Loud thinking ಎನ್ನುತ್ತಾರಲ್ಲಾ ಹಾಗೆ.'

'ಎಂತಹ ; ಕಾಕತಾಳನ್ಯಾಯ. ನಾನೂ ಅದನ್ನೇ ನಿಮ್ಮೊಂದಿಗೆ ಚರ್ಚಿಸಲು ಬಂದೆ.'

'ಇಂದು ನಮ್ಮೆಲ್ಲರ ಮನಸ್ಸೂ ಒಂದೇ ದಾರಿಯಲ್ಲಿ ಹರಿಯುತ್ತಿದೆ. ನಮ್ಮಲ್ಲಿ ಕೆಲವರು ತೀವ್ರವಾದಿಗಳು, ಕೆಲವರು ಮಿತವಾದಿಗಳು. ಆದರೆ ಎಲ್ಲರೂ ಕನ್ನಡಿಗರು, ಎಲ್ಲರ ಹೃದಯವೂ ಕನ್ನಡಕ್ಕೆ ದನಿಗುಡುತ್ತದೆ. ಎಲ್ಲರ ಅಂತಃಕರಣದಲ್ಲಿಯೂ ಒಂದೇ ಕಳವಳ. ಇದು ಕನ್ನಡ ನಾಡಿನ ಉಜ್ವಲ ಭವಿಷ್ಯತ್ತಿನ ಶುಭಚಿನ್ಹವೆನ್ನಬಹುದು.'

'ಕನ್ನಡ ಮಾಧ್ಯಮವನ್ನು ಸೆನೆಟ್‌ನವರು ಒಪ್ಪಿಕೊಂಡಿದ್ದಾರಲ್ಲಾ. ಅದು ಕಾರ್ಯಮುಖವಾಗುವುದು ಹೇಗೆ?'

'ಯೂನಿವರ್ಸಿಟಿ ಕೌನ್ಸಿಲ್ ಮತ್ತು ಸರ್ಕಾರಗಳ ಒಪ್ಪಿಗೆಯನ್ನು ಪಡೆದ ಮೇಲೆ.'

'ಅಲ್ಲಿ ಅದು ಸುಲಭವಾಗಿ ಪಾರಾಗುತ್ತದೆಯೇ?'

'ನಿಮಗಿರುವ ಸಂದೇಹವೇ ನನಗೂ ಇದೆ. ಈಗಾಗಲೇ ಪ್ರತಿಪಕ್ಷದವರು ತಮ್ಮ ಕೈಚಳಕವನ್ನಾರಂಭಿಸಿದ್ದಾರೆ.'

'ಯಾರು ಯಾರು?'

'ಮೊದಲನೆಯದಾಗಿ ವಿಶ್ವವಿದ್ಯಾನಿಲಯದ ಪ್ರೊಫೆಸರ್‌ಗಳು. ಸೆನೆಟ್ ಕೌನ್ಸಿಲ್‌ಗಳಲ್ಲಿ ಇವರ ಮಾತು ನಡೆಯುವುದರಿಂದ ಇವರ ಮೈತ್ರಿಯು ಅವಶ್ಯಕ. ಸೆನೆಟ್ ಸಭೆಗೆ ಶ್ರೀ ಮಲ್ಲಾರಾಧ್ಯರ ನಿರ್ಣಯ ಬಂದ ತರುಣದಲ್ಲಿ ಒಬ್ಬಿಬ್ಬರು ಪ್ರೊಫೆಸರ್‌ಗಳು 'ಇದೇನು ನರ್ಪವರ್ಷದ ಸಿಡುಗು' ಎಂದು ನನ್ನ ಹತ್ತಿರ ಹೇಳಿದರು. ಕನ್ನಡ ಮಾಧ್ಯಮ ಅವರಿಗೆ ಸಿಡುಗಿನಂತೆ. ಅದನ್ನು ಪ್ರತಿಭಟಿಸಲು ಅವರು ಸರ್ವಸಾಹಸ ಮಾಡುತ್ತಾರೆ.'

'ಏತರಿಂದ?'

'ನೈಚ್ಯಾನುಸಂಧನದಿಂದ. ನಿಮಗೆ ಆಶ್ಚರ್ಯವಾಗಬಹುದು. ಕನ್ನಡ ಬರದಿರುವ ಪರದೇಶೀಯ ಆಂಗ್ಲ ಪ್ರೊಫೆಸರುಗಳು ಇದನ್ನು ವಿರೋಧಿಸುವುದು ಸಹಜ. ತಮ್ಮ ಸಾಮ್ರಾಜ್ಯವಾದದ ಕಪಿಮುಷ್ಟಿ ಸಡಲುವುದೆಂದು ಅವರು ಅಂಜುವುದು ನ್ಯಾಯವೇ ಆಗಿದೆ. ಆದರೆ ನಮ್ಮವರೇ—ಭಾರತೀಯರಾದ ಕನ್ನಡೇತರ ಪ್ರೊಫೆಸರುಗಳು—ಕನ್ನಡಿಗರಾದ ಪ್ರೊಫೆಸರುಗಳೂ ಇದನ್ನು ವಿರೋಧಿಸುವುದು ಹಿಂದೂಸ್ಥಾನದಲ್ಲಿ ಮಾತ್ರ ಸಾಧ್ಯವಾಗುವ ಸೋಜಿಗ.'

'ಕನ್ನಡಿಗರಾದ ಪ್ರೊಫೆಸರ್‌ಗಳು ಸಂತೋಷಪಡಬೇಕು. ಅವರೇಕೆ ವಿರೋಧಿಸುತ್ತಾರೆ.'

'ಇಂಗ್ಲಿಷಿನ ಮೇಲಿರುವ ದುರ್ಮೋಹದಿಂದ. ಇಂಗ್ಲಿಷ್ ಅವರಿಗೆ ತಾಯ್ನುಡಿ. ಅವರು ಕುಡಿದಿರುವುದು ಮೇರಿಯ ಮೊಲೆಹಾಲು ಮತ್ತು ಕುಡಿಯುತ್ತಿರುವುದು ಥೇಮ್ಸ್ ನದಿಯ ತೀರ್ಥ. ಕನ್ನಡ ಮಾಧ್ಯಮ ಬಂದರೆ ಇಂಗ್ಲಿಷಿನ ದರ್ಜೆ ಇಳಿದುಹೋಗುತ್ತದಂತೆ! ಅರ್ಥವಾಗದ ಇಂಗ್ಲಿಷ್ ಕಲಿತು ನಮ್ಮ ವಿದ್ಯಾರ್ಥಿಗಳ ವಿದ್ಯಾದರ್ಜೆ (Standard of Education) ರಸಾತಳಕ್ಕೆ ಇಳಿದುಹೋಗಿರುವುದು ಅಂತಹ ಮಹನೀಯರಿಗೆ ವಿಷಾದವೆನಿಸುವುದಿಲ್ಲ. ನಮ್ಮ ಜನದ ವಿದ್ಯಾ ಬುದ್ಧಿ ಸಂಸ್ಕಾರ ಅವರ ಭಾಷೆಯಿಂದಲೇ ಆಗಬೇಕೆಂಬ ಅರಿವು ಆ ವಿಶ್ವವಿದ್ಯಾನಿಲಯದ ಪಂಡಿತರಿಗಿಲ್ಲ. ಅವರು ಕನ್ನಡ ರೈತರ ಹಣವನ್ನು ತಿನ್ನುತ್ತಿರುವುದು ಇಂಗ್ಲಿಷರ ಭಾಷೆ, ಸಂಸ್ಕೃತಿ, ವಿಜ್ಞಾನವನ್ನು ಸಂರಕ್ಷಿಸುವುದಕ್ಕೆ. ಎರಡನೆಯ ಕಾರಣ, ಸ್ವಭಾವಜನ್ಯವಾದ ಆಲಸ್ಯ. ಈಗ ಹೇಗೂ ಹರಕು ಮುರುಕು ಇಂಗ್ಲಿಷಿನಲ್ಲಿ ಹೇಳಿದ್ದನ್ನೇ ಪಾಠ ಹೇಳಿ ಹೇಳಿ ರೂಢಿ ಮಾಡಿಕೊಂಡಿರುತ್ತಾರೆ. ಕನ್ನಡ ಮಾಧ್ಯಮ ಬಂದರೆ ಕಷ್ಟಪಡಬೇಕು. ಭಾಷೆಯನ್ನೂ ವೈಜ್ಞಾನಿಕ ಪಾರಿಭಾಷಿಕ ಪದಗಳನ್ನು ಕಲಿತುಕೊಳ್ಳಬೇಕು. ತಮ್ಮ ವಿಚಾರಗಳನ್ನು ಸರಿಯಾಗಿ ಉಚ್ಚರಿಸುವುದನ್ನೂ ರೂಢಿಸಿಕೊಳ್ಳಬೇಕು. ಈಗ ವಾರಕ್ಕೆ ಒಂದು ಗಂಟೆ ಪಾಠ ಹೇಳಿ ಪಾರಾಗಿ ಮನೆಯಲ್ಲಿ ಇಸ್ಪೀಟಿಗೆ ಕೂಡುತ್ತಿದ್ದ ಪ್ರೊಫೆಸರರಿಗೆ ಕಷ್ಟಕ್ಕೆ ಬರುತ್ತದೆ ಪ್ರಸಂಗ. ಮೂರನೆಯ ಕಾರಣ, ಕನ್ನಡದಲ್ಲಿ ವಿಷಯಗಳನ್ನು ಪ್ರತಿಪಾದಿಸಲು ಹೊರಟರೆ ವಿದ್ಯಾರ್ಥಿಗಳಿಗೆ ತಮ್ಮ ನಿಜ ಬಂಡವಾಳ ಎಲ್ಲಿ ಪತ್ತೆಯಾಗಿಬಿಡುತ್ತದೆಯೋ ಎಂಬ ಭೀತಿ.'

'ತಮ್ಮ ಹತ್ತು ಜನದ ಸೌಲಭ್ಯವನ್ನು ನೋಡಿಕೊಂಡು ದೇಶದ ಹಿತವನ್ನು ದುರ್ಲಕ್ಷಿಸುವ ಇವರನ್ನು ಏನೆನ್ನಬೇಕು?'

'ಕನ್ನಡ ದೇಶದ fifth columnists ಎಂದು ಕರೆಯಬೇಕು. ಇವರನ್ನು ಎತ್ತಿ ಕಟ್ಟಿ ವಿರೋಧದ ಹಿಮ್ಮೇಳ ಹಾಡುವವರು ಇನ್ನೂ ಕೆಲವರಿದ್ದಾರೆ.'

'ಯಾರು?'

'ಬೇರೆ ಪ್ರಾಂತ್ಯಗಳಿಂದ ಬಂದು ಕನ್ನಡ ನಾಡಿನಲ್ಲಿ ನೆಲಸಿ, ಇಲ್ಲಿ ಉಂಡು ತಿಂದು ಮೆರೆದು, ಕೀರ್ತಿ, ಕಾಂಚನಗಳನ್ನು ಸಂಪಾದಿಸಿರುವ ಬೇರೆ ಪ್ರಾಂತ್ಯದ ತಮಿಳರು, ತೆಲುಗರು. ಕನ್ನಡ ಮುಂದಕ್ಕೆ ಬಂದರೆ ಹೊರಗಿನಿಂದ ತಮ್ಮ ಚಿಕ್ಕಪ್ಪ ದೊಡ್ಡಪ್ಪನ ಮಕ್ಕಳನ್ನು ತಂದು ಕೆಲಸ ಕಾರ್ಯಗಳಿಗೆ ತುಂಬುವ ಅವಕಾಶ ಹೋಗಿಬಿಡುತ್ತದಲ್ಲಾ ಎಂದು ಇವರ ದುಃಖ.'

'ಮುಸಲ್ಮಾನ ಬಂಧುಗಳೂ ತಮ್ಮ ವಿರೋಧವನ್ನು ಸೂಚಿಸಿದ್ದಾರಲ್ಲಾ.'

'ವಿರೋಧವನ್ನು ಸೂಚಿಸಿಲ್ಲ, ತಿಪ್ಪಗಿದ್ದಾರೆ. ಕೆಲವು ದಿವಸಗಳ ಹಿಂದೆ ಮೈಸೂರು ಮುಸ್ಲಿಮ್ ಲೀಗಿನ ಮುಖಂಡರಾದ ಖಾನ್‌ಬಹದ್ದೂರ್ ಮಹಮ್ಮದ್ ಷರೀಫ್ ಸಾಹೇಬರು 'ಡೈಲಿ ಪೋಸ್ಟ್' ಪತ್ರಿಕೆಗೆ ಒಂದು ಲೇಖನವನ್ನು ಬರೆದು ಕನ್ನಡ ಮಾಧ್ಯಮ ಬೇಡವೆನ್ನುವವರ ಸಲುವಾಗಿ ಇಂಗ್ಲಿಷ್ ಮಾಧ್ಯಮವುಳ್ಳ ತರಗತಿಗಳಿರಬೇಕೆಂದು ಸೂಚಿಸಿದ್ದಾರೆ. ಇವಕ್ಕೆ ಹೈದರಾಬಾದಿನ ನಿಜಾಂ ಕಾಲೇಜಿನ ದೃಷ್ಟಾಂತ ಕೊಟ್ಟಿದ್ದಾರೆ. ಹೈದರಾಬಾದಿನ ನಿಜಾಂ ಕಾಲೇಜ್ ಉಸ್ಮಾನಿಯಾ ವಿಶ್ವವಿದ್ಯಾನಿಲಯದ ಕೈಗೇ ಸದ್ಯದಲ್ಲಿಯೇ ಬಂದು ಅಲ್ಲಿಯೂ ಉರ್ದು ಮಾಧ್ಯಮವೇ ಪ್ರಸಾರಕ್ಕೆ ಬರುವುದರಲ್ಲಿದೆಯೆಂಬುದು ಖಾನ್‌ಬಹದ್ದೂರರವರಿಗೆ ಗೊತ್ತಿಲ್ಲ.'

'ಮುಸಲ್ಮಾನರ ಬೇಡಿಕೆ ನ್ಯಾಯವಾಗಿಲ್ಲವೇ?'

'ಇಲ್ಲವೆಂದೇ ನನ್ನ ಅಭಿಪ್ರಾಯ. ಕನ್ನಡ ನಾಡಿನಲ್ಲಿರುವವರೆಲ್ಲಾ ಯಾವ ಧರ್ಮ ಮತಗಳಿಗೆ ಸೇರಿದವರಾದರೂ ಕನ್ನಡಿಗರೇ. ಧರ್ಮ ಅವರ ವೈಯಕ್ತಿಕ, ಸಾಮಾಜಿಕ ವಿಚಾರ. ಕನ್ನಡತನ ಪ್ರಾಂತ್ಯವಿಚಾರ. ಬಂಗಾಳದಲ್ಲಿರುವ ಮುಸಲ್ಮಾನರಿಗೆ ಉರ್ದು ಗಂಧವಿಲ್ಲ, ಆಂಧ್ರದಲ್ಲಿರುವ ಮುಸಲ್ಮಾನರಿಗೆ ಉರ್ದು ಗಂಧವಿಲ್ಲ, ಉತ್ತರ ಕರ್ನಾಟಕದಲ್ಲಿರುವ ಮುಸಲ್ಮಾನರಿಗೂ

ಹಾಗೆಯೇ. ಬಂಗಾಳ, ಆಂಧ್ರಗಳಲ್ಲಿ ಉತ್ತಮ ಕವಿಗಳು ಮುಸಲ್ಮಾನರೇ ಆಗಿದ್ದಾರೆ. ಹಿಂದೂ ಕವಿಗಳ ಸರಿಸಮನಾಗಿ, ಮೇಲ್ಗೈಯಾಗಿ ಅವರು ಬಂಗಾಳಿ, ತೆಲುಗಿನಲ್ಲಿ ಕವಿತೆ, ಕಥೆ, ಕಾದಂಬರಿಗಳನ್ನು ಬರೆದಿದ್ದಾರೆ. ತಮ್ಮ ಸೋದರ ಪ್ರಾಂತ್ಯದ ಮುಸಲ್ಮಾನರ ಮೇಲ್ಪಂಕ್ತಿ ಕನ್ನಡಿಗ ಮುಸಲ್ಮಾನರ ಅವಗಾಹನೆಗೆ ಬರಬೇಕು.'

'ಕನ್ನಡ ಕಲಿಯುವುದು ಅವರಿಗೆ ಸಾಧ್ಯವೇ?'

'ಏಕೆ ಸಾಧ್ಯವಿಲ್ಲ. ಅವರ ವ್ಯವಹಾರಭಾಷೆ ಕನ್ನಡ. ಮನೆ ಬಿಟ್ಟು ಹೊರಗೆ ಬಂದರೆ ಅವರು ಎಲ್ಲರೊಂದಿಗೆ ಕನ್ನಡದಲ್ಲಿಯೇ ವ್ಯವಹರಿಸುವುದು. ಮುಸಲ್ಮಾರಲ್ಲಿ ಕನ್ನಡವನ್ನು ಗಂಭೀರವಾಗಿ, ಸುಂದರವಾಗಿ ಮಾತಾಡುವ ವಾಗ್ಮಿಗಳಿದ್ದಾರೆ, ಸೊಗಸಾಗಿ ಕನ್ನಡದಲ್ಲಿ ಬರೆಯಬಲ್ಲ ಲೇಖಕರಿದ್ದಾರೆ. ಕಳೆದ ವರ್ಷದ 'ಪ್ರಬುದ್ಧ ಕರ್ನಾಟಕ'ದ ಒಂದು ಸಂಚಿಕೆಯಲ್ಲಿ ಶ್ರೀ ಎಸ್. ಕೆ. ಕರೀಂಖಾನರು ಬರೆದಿರುವ 'ನಯನ ಭೀಕರ ಕರ್ಬಲ' ಕಥೆಯನ್ನು ಓದಿ ನೋಡಿ. ಕನ್ನಡ ಪಂಡಿತರನ್ನು ತಲೆದೂಗಿಸುವ ಶೈಲಿಯನ್ನು ಕರೀಂಖಾನರು ಸಾಧಿಸಿದ್ದಾರೆ. ಮುಸಲ್ಮಾನರಲ್ಲಿ ಶಿಶುನಾಳ ಷರೀಫ್ ಸಾಹೇಬರು, ಖಾಜಾ ಖಾನರಂತಹ ಉದ್ದಾಮ ಋಷಿ-ಕವಿಗಳು ಕನ್ನಡದಲ್ಲಿ ಆಗಿಹೋಗಿದ್ದಾರೆ. ಉರ್ದು ಕಲಿಯುವುದಕ್ಕಿಂತಲೂ, ಇಂಗ್ಲಿಷ್ ಕಲಿಯುವುದಕ್ಕಿಂತಲೂ ಕನ್ನಡ ಕಲಿಯುವುದು ಮುಸಲ್ಮಾನರಿಗೆ ಸುಲಭ. ಮುಸ್ಲಿಮ್ ಮುಂದಾಳುಗಳು ಒಣ ಅಭಿಮಾನವನ್ನು ಬಿಟ್ಟು ನಿಜವಾಗಿಯೂ ತಮ್ಮ ಸಮಾಜದ ಹಿತವನ್ನು ಬಯಸುವುದಾದರೆ ಕರ್ನಾಟಕದ ಮುಸಲ್ಮಾನರಲ್ಲಿ ಸಾರ್ವತ್ರಿಕ ಕನ್ನಡ ಪ್ರಸಾರ ಮಾಡಬೇಕು. ಮುಸಲ್ಮಾನರಲ್ಲಿ ವಿದ್ಯಾವಂತರ, ಅಕ್ಷರಜ್ಞರ ಸಂಖ್ಯೆ ತೀರಾ ಕಡಿಮೆ. ಇದರ ಕಾರಣ ಉರ್ದು ಲಿಪಿ. ಈ ಕಷ್ಟವನ್ನು ಅರಿತೇ ಗಾಜಿ ಮುಸ್ತಾಫ ಕೆಮಲ್ ಪಾಷಾ ಅವರು ಟರ್ಕಿಯಲ್ಲಿ ರೋಮನ್ ಲಿಪಿಯನ್ನು ಪ್ರಸಾರಕ್ಕೆ ತಂದದ್ದು.'

'ಉರ್ದು ಅವರಿಗೆ ಧರ್ಮಭಾಷೆಯಾಗಿದೆಯಲ್ಲಾ.'

'ಉರ್ದು ಅಲ್ಲ ಅರಾಬಿಕ್. ಉರ್ದು ಕಲಿತವರೆಲ್ಲಾ ಕುರಾನನ್ನು ಓದ ಲಾಗುವುದಿಲ್ಲ. ಅದಕ್ಕೆ ಪ್ರತ್ಯೇಕವಾಗಿ ಪರಮ ಶ್ರಮದಿಂದ ಅರಾಬಿಕ್ ಕಲಿ

ಯಲೇ ಬೇಕು. ಕ್ರಿಸ್ತರ ವೇದ ಬೈಬಲ್ ಹಿಬ್ರೂ, ಇಂಗ್ಲಿಷ್ ಭಾಷೆಗಳಲ್ಲಿದೆ. ಅವರು ಕನ್ನಡ ಬೈಬಲ್‌ನಲ್ಲಿಯೇ ತಮ್ಮ ಮೋಕ್ಷವನ್ನು ಗಳಿಸುತ್ತಿಲ್ಲವೇ? ಬ್ರಾಹ್ಮಣರ ಧರ್ಮಭಾಷೆ ಸಂಸ್ಕೃತ—ಕನ್ನಡವನ್ನು ಅವರು ಆ ಕಾರಣಕ್ಕಾಗಿ ದೂರಮಾಡಿಲ್ಲ. ಧಾರ್ಮಿಕೋತ್ಕ್ರಾಂತಿಗೆ ಭಾಷೆ ಅಡ್ಡಿಬರುವುದಿಲ್ಲ. ಅದೇ ಮೋಕ್ಷವನ್ನು ಕನ್ನಡದಲ್ಲಿಯೂ ಗಳಿಸಬಹುದು. ಪ್ರಮಥರು ಇದನ್ನು ಆಚರಿಸಿ ತೋರಿಸಿದ್ದಾರೆ.'

'ವಿಶ್ವವಿದ್ಯಾನಿಲಯದ ಶಿಕ್ಷಣವನ್ನು ಸಂಪೂರ್ಣ ಕನ್ನಡೀಕರಿಸುವುದರ ಮೇಲೆ ಇನ್ನು ಕೆಲವು ಆಕ್ಷೇಪಣೆಗಳು ಬಂದಿವೆ.'

'ಅವು ಯಾವುವು?'

'ಯೋಗ್ಯವಾದ ಪಠ್ಯಪುಸ್ತಕಗಳಿಲ್ಲವೆಂಬುದೊಂದು.'

'ಹೈದರಾಬಾದಿನ ಉಸ್ಮಾನಿಯಾ ವಿಶ್ವವಿದ್ಯಾನಿಲಯದವರು ಉರ್ದು ಮಾಧ್ಯಮವನ್ನು ಆರಂಭಿಸಿದಾಗಲೂ ಇದೇ ಆಕ್ಷೇಪಣೆ ಬಂತು. ನಿಜಾಂ ಸರ್ಕಾರ ಕೊರತೆಯನ್ನು ಸುಲಭವಾಗಿ ಪರಿಹರಿಸಿತು. ಒಂದು ಭಾಷಾಂತರ ಶಾಖೆಯೇರ್ಪಟ್ಟು ಇಂಗ್ಲಿಷ್, ಫ್ರೆಂಚ್, ಜರ್ಮನ್ ಭಾಷೆಗಳಲ್ಲಿರುವ ಉತ್ತಮೋತ್ತಮ ಗ್ರಂಥಗಳು ಉರ್ದುವಿಗೆ ಅನುವಾದಗೊಂಡವು. ಪಂಡಿತರು ಉರ್ದುವಿನಲ್ಲಿ ವಿಜ್ಞಾನ ಶಾಸ್ತ್ರ, ಸಾಹಿತ್ಯ ಗ್ರಂಥಗಳನ್ನು ಬರೆದು ಕೊರತೆಯನ್ನು ತುಂಬಿದರು. ನಮ್ಮಲ್ಲಿಯೂ ಈ ಕೆಲಸ ಈಗಾಗಲೇ ಆಗುತ್ತಿದೆ. ಕನ್ನಡ ಸಾಹಿತ್ಯ ಪರಿಷತ್ತು ಮತ್ತು ಸೆಂಟ್ರಲ್ ಕಾಲೇಜುಗಳ ಕರ್ನಾಟಕ ಸಂಘದ ಆಶ್ರಯದಲ್ಲಿ ಅನೇಕ ವಿದ್ವಾಂಸರು ಕ್ಲಿಷ್ಟವಾದ ವೈಜ್ಞಾನಿಕ ವಿಷಯಗಳ ಮೇಲೆ ಎಲ್ಲರಿಗೂ ತಿಳಿಯುವ ರೀತಿಯಲ್ಲಿ ಉಪನ್ಯಾಸಗಳನ್ನು ಮಾಡಿದ್ದಾರೆ. ಶ್ರೀ ಪಿ. ಶ್ರೀನಿವಾಸರಾಯರು ಐನ್‌ಸ್ಟೀನನ ತತ್ವದಂತಹ ಅತಿ ಕ್ಲಿಷ್ಟ ವಿಷಯದ ಮೇಲೆ ಕನ್ನಡದಲ್ಲಿ ಉಪನ್ಯಾಸ ಮಾಡಿದ್ದಾರೆ. ಶ್ರೀ ಎಲ್. ರಾಮರಾಯರು ಭೂಗರ್ಭ ಶಾಸ್ತ್ರದ ಮೇಲೂ, ಡಾ|| ಶ್ರೀನಿವಾಸಯ್ಯಂಗಾರ್ಯರು ಖಗೋಳಶಾಸ್ತ್ರದ ಮೇಲೂ, ಶ್ರೀ ಸುಬ್ಬಾ ಜೋಯಿಸರು ರಸಾಯನ ಶಾಸ್ತ್ರದ ಮೇಲೂ, ಡಾ|| ಎನ್. ಎಲ್. ನಾರಾಯಣಶಾಸ್ತ್ರಿಗಳು ಮನಶ್ಶಾಸ್ತ್ರದ ಮೇಲೂ, ಪ್ರೊ. ಬಿ. ವೆಂಕಟೇಶಾಚಾರ್ಯರು ಭೌತಶಾಸ್ತ್ರದ ಮೇಲೂ ಉಪನ್ಯಾಸಗಳನ್ನು ಮಾಡಿ

ವ್ಯಾಪ್ತಿ, ಲೇಖನ ಪುಸ್ತಕಗಳನ್ನು ಬರೆದಿದ್ದಾರೆ. ವಿಶ್ವವಿದ್ಯಾನಿಲಯದ ಹೊರಗಿರುವ ಅನೇಕ ಪಂಡಿತರೂ ಶಾಸ್ತ್ರ, ವಿಜ್ಞಾನ ವಿಷಯಗಳ ಮೇಲೆ ಕನ್ನಡದಲ್ಲಿ ಬರೆದಿದ್ದಾರೆ. ಕನ್ನಡ ಮಾಧ್ಯಮಕ್ಕೆ ಸರ್ಕಾರ ಒಪ್ಪಿಗೆ ಕೊಟ್ಟರೆ ಪಠ್ಯ ಪುಸ್ತಕಗಳನ್ನು ಒಂದೆರಡು ವರ್ಷಗಳಲ್ಲಿ ನಮ್ಮ ವಿದ್ವಾಂಸರು ಪೂರೈಸುತ್ತಾರೆ. ಈ ವಿಷಯಗಳು ಇಂಗ್ಲಿಷ್ ಶ್ರೀಮುಖದಿಂದಲೇ ಬರಬೇಕು, ಕನ್ನಡದಿಂದ ಬಂದರೆ ಮೈಲಿಗೆಯಾಗುತ್ತದೆ ಎನ್ನುವ ಮನೋಭಾವ ಮೊದಲು ಹೋಗಬೇಕು.'

'ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಮಾಧ್ಯಮವನ್ನು ಆಚರಣೆಗೆ ತರುವುದು ಮಾತ್ರವಲ್ಲದೆ ಸರ್ಕಾರ ಹೆಚ್ಚಿನ ಪ್ರಸಾರ ಕೆಲಸವನ್ನು ಕೈಗೊಳ್ಳಬೇಡವೇ.'

'ಈಗಾಗಲೇ ಸರ್ಕಾರ ಗ್ರಾಮಾಂತರಗಳಲ್ಲಿ ಪುಸ್ತಕ ಭಂಡಾರಗಳ ಸ್ಥಾಪನೆ, ವಯಸ್ಕರ ಶಿಕ್ಷಣಗಳ ಕಡೆ ಮನಸ್ಸು ಹಾಕಿದೆ. ಸ್ತುತ್ಯ. ಆದರೆ ಈಗ ನಡೆದಿರುವ ಪ್ರಯತ್ನ ಸಾಲದು. ವಯಸ್ಕರ ಶಿಕ್ಷಣದ ಕೆಲಸ ಹೆಚ್ಚು ರಭಸದಿಂದ ಸಾಗಬೇಕು. ರಾಜಕೀಯ ರಂಗದಲ್ಲಿ ದುಡಿದು ಹೆಚ್ಚಾಗಿ ಜನತೆಯ ಸಂಪರ್ಕ ಇಟ್ಟುಕೊಂಡಿರುವ ಕಾಂಗ್ರೆಸ್ಸಿನವರು ಈ ಕೆಲಸವನ್ನು ಕೈಗೆ ತೆಗೆದುಕೊಳ್ಳಬೇಕು. ನಮ್ಮ ದೇಶದಲ್ಲಿರುವ ನಿರಕ್ಷರತೆಯ ಮಹಾಭೂತ ಸಂಹಾರಕ್ಕೆ ಎಲ್ಲರೂ ತ್ರಿಕರಣಪೂರ್ವಕವಾಗಿ ದುಡಿಯಬೇಕು. ವಿದ್ಯಾರ್ಥಿಗಳು ತಮ್ಮ ರಜೆಯ ಕಾಲದಲ್ಲಿ ಗ್ರಾಮಾಂತರಗಳಲ್ಲಿ, ಕೂಲಿಗಾರರ ಕ್ಷೇತ್ರಗಳಲ್ಲಿ, ವಯಸ್ಕರ ಶಿಕ್ಷಣ ಶಾಲೆಗಳನ್ನು ತೆರೆಯಬೇಕು. ಇನ್ನು ಹತ್ತು ವರ್ಷದೊಳಗಾಗಿ ಕನ್ನಡ ನಾಡಿನಲ್ಲಿ ಒಂದು ಕಾಗದವನ್ನು ಓದಿ ಬರೆಯಲಾಗದ, ಒಂದು ವೃತ್ತಪತ್ರಿಕೆಯನ್ನು ಓದಿಕೊಳ್ಳಲಾಗದ ಯಾವನೂ ಇರಬಾರದು. ಮತ್ತೆ ಸರ್ಕಾರದ ಕಾಗದ ಪತ್ರಗಳು, ವ್ಯವಹಾರ ಕನ್ನಡವಾಗಬೇಕು'

'ಈ ದೃಷ್ಟಿಯಿಂದ ಸ್ವಲ್ಪ ಕೆಲಸವಾಗಿದೆಯಲ್ಲವೇ.'

'ನ್ಯಾಯವಿಧಾಯಕ ಸಭಾಧ್ಯಕ್ಷರಾದ ಶ್ರೀ ಡಿ. ಎಚ್. ಚಂದ್ರಶೇಖರಯ್ಯನವರು ಕೌನ್ಸಿಲ್ ಅಸೆಂಬ್ಲಿ ವರದಿಗಳನ್ನು ಕನ್ನಡದಲ್ಲಿ ಪ್ರಕಟಿಸುವ ಪರಿಪಾಠ ತಂದು ಉಪಕಾರ ಮಾಡಿದ್ದಾರೆ. ನ್ಯಾಯವಿಧಾಯಕಸಭಾ ಸದಸ್ಯರಲ್ಲಿ ಅನೇಕರು ಇಂಗ್ಲಿಷನ್ನು ಬಿಟ್ಟು ಕನ್ನಡದಲ್ಲಿಯೇ ಚರ್ಚೆ, ಭಾಷಣಗಳನ್ನು ಮಾಡಲಾರಂಭಿಸಿದ್ದಾರೆ. ಆದರೆ ಸರ್ಕಾರ ಸುಮ್ಮನೆ ಕುಳಿತಿದೆ. ಕೋರ್ಟಿನ

ಭಾಷೆ ಸಂಪೂರ್ಣ ಕನ್ನಡವಾಗುವ ತನಕ ಪಕ್ಷಕಾರರಾದ ಹಳ್ಳಿಯವರಿಗೆ ಹದಿನಾರಾಣೆ ನ್ಯಾಯ ಸಿಕ್ಕುತ್ತದೆ ಎಂದು ಹೇಳಲು ಬರುವಂತಿಲ್ಲ.'

'ಎಲ್ಲಾ ಸರ್ಕಾರ ಮಾಡಲಿ ಎಂದು ನಿರೀಕ್ಷಿಸುವುದು ನ್ಯಾಯಸಮ್ಮತ ವಾದೀತೇ.'

'ಹಾಗೆ ಯಾರು ಹೇಳಿದರು. ಸಾರ್ವತ್ರಿಕ ವಿದ್ಯಾಪ್ರಸಾರ, ಅಕ್ಷರತಾ ಪ್ರಚಾರ ಸರ್ಕಾರಕ್ಕೆ ಎಷ್ಟು ಸೇರಿದುದೊ ಸಾರ್ವಜನಿಕರಿಗೂ ಅಷ್ಟೇ ಸೇರಿದು ದಾಗಿದೆ. ಸಾರ್ವಜನಿಕರ ಸಹಾನುಭೂತಿ, ಸಹಕಾರವಿಲ್ಲದೆ ಸರ್ಕಾರ ಏನು ಮಾಡಿದರೂ ಯಶಸ್ವಿಯಾಗುವುದಿಲ್ಲ. ಸರ್ಕಾರ ತನ್ನ ಭಾಗದ ಜವಾಬ್ದಾರಿ ಯನ್ನು ಪೂರೈಸಬೇಕು. ಸರ್ಕಾರದ ವ್ಯವಹಾರ, ಕೋರ್ಟು ಕಛೇರಿಗಳ ವ್ಯವಹಾರ ಕನ್ನಡದಲ್ಲಿಯೇ ಆಗುವಂತೆ ಏತಕ್ಕೆ ಸುಧಾರಿಸಬಾರದು.'

'ಸರ್ಕಾರ ಯಾವಾಗಲೂ ಸ್ವಲ್ಪ ಮಂದಗಮನದಿಂದಲೇ ನಡೆಯುವುದು.'

'ಸಾರ್ವಜನಿಕರು ಚಳುವಳಿ ಹೂಡಿ, ಪ್ರಸಾರ ಕಾರ್ಯ ಕೈಗೊಂಡು ಸರ್ಕಾರ ಈ ಕೆಲಸವನ್ನು ಬೇಗ ಆಚರಣೆಗೆ ತರುವಂತೆ ಮಾಡಬೇಕು. ಜನತೆ ಮತ್ತು ಅದರ ಮುಖಂಡರು ಆಲಸ್ಯವನ್ನು ಬಿಡಬೇಕು. ಕನ್ನಡ ಸಂಸ್ಥೆಗಳು ಎಚ್ಚರಗೊಳ್ಳಬೇಕು. ಶ್ರೀ ಡಿ. ವಿ. ಗುಂಡಪ್ಪನವರು ಹೇಳಿದಂತೆ ಉತ್ಸಾಹ ಯುಗ ಮುಗಿಯಿತು. ಇದು ಕಾರ್ಯದೀಕ್ಷಾ ಯುಗ. ಕನ್ನಡಿಗರು ಈಗಲೂ ಆಲಸಿಗಳಾಗಿ ಕುಳಿತರೆ ನಾಳೆ ಎಲ್ಲರೂ ದುಃಖಿಸುವಂತಾಗುತ್ತದೆ. ಮುಂದಿನ ಜನಾಂಗ ನಮಗೆ ಶಾಪ ಹಾಕುತ್ತಾರೆ. ಜನತೆಯಲ್ಲಿ ಅಭೂತಪೂರ್ವವಾದ ಜಾಗೃತಿಯುಂಟಾಗುತ್ತಿದೆ. ತನ್ನತನವನ್ನು ಅರಿಯುವ, ಉಳಿಸಿಕೊಳ್ಳುವ, ಮುಂದುವರಿಸುವ ಹಂಬಲ ಹಬ್ಬುತ್ತಿದೆ. ಕನ್ನಡ ನಾಡಿನ ಮುಖಂಡರು ಒಗ್ಗೂಡಿ ಸುಸಂಘಟಿತ ರೀತಿಯಲ್ಲಿ ಕಾರ್ಯಕ್ರಮವನ್ನು ನಿಯೋಜಿಸಬೇಕು.'

'ಇದು ಹೇಗೆ ಸಾಧ್ಯ.'

'ಹೇಗೆಂದರೆ ಕನ್ನಡ ಚಳುವಳಿಯನ್ನು ಕೆಲವರ ಆತ್ಮಪ್ರಶಂಸೆಯ ಸಾಧನ ಸ್ಥಿತಿಯಿಂದ ಬಿಡುಗಡೆ ಮಾಡಿ ಜನತೆಯ ಆಂದೋಲನವನ್ನಾಗಿ ಮಾಡುವುದರಿಂದ. ಜೀವನದ ಹಾಸು ಹೊಕ್ಕುಗಳಲ್ಲಿ ಕನ್ನಡವೇ ಇರಬೇಕು. ನಮ್ಮನ್ನು ಒಂದು ಜನಾಂಗವನ್ನಾಗಿ, ಒಂದು ಕುಲವಾಗಿ ಬೆಸೆಯುವುದು

ಕನ್ನಡ; ನಮ್ಮ ಸಂಪತ್ತನ್ನು ನಮ್ಮಲ್ಲಿಯೇ ಉಳಿಸಿ ನಮ್ಮವರ ಹಿತಸಾಧನೆಗೆ ಅನುಕೂಲಪಡಿಸುವುದು ಕನ್ನಡ. ಕನ್ನಡ ಚಳುವಳಿ ಕೇವಲ ಭಾಷೆ, ಸಾಹಿತ್ಯ, ಸಂಸ್ಕೃತಿಗಳಿಗೆ ಮಾತ್ರ ಸಂಬಂಧಪಟ್ಟದ್ದಲ್ಲ. ನಮ್ಮ ಬಾಳು, ಬದುಕು, ವ್ಯಾಪಾರ, ಕೈಗಾರಿಕೆ, ಕೃಷಿ, ಪರದೇಶೀಯ ಸಂಬಂಧ ಎಲ್ಲಾ ಇದರಲ್ಲಿ ಅಡಕವಾಗಿದೆ. ನಮ್ಮ ನಾಡಿನ ಶ್ರಮಜೀವಿಗಳ ಹಿತಾಹಿತ ಇದರಲ್ಲಿ ಕೂಡಿದೆ. ನಮ್ಮ ವಿದ್ಯಾರ್ಥಿಗಳ ಆಗುಹೋಗುಗಳು ಇದರಲ್ಲಿ ಹುದುಗಿದೆ. ಇದು ಎಲ್ಲರ ಜೀವನವನ್ನು ಮುಟ್ಟುವ, ತಿದ್ದುವ, ಉಳಿಸುವ, ಅಳಿಸುವ, ಪ್ರಶ್ನೆ.'

'ಪುನರ್ಘಟಿತ ಭಾರತದಲ್ಲಿ ಈ ಭಾಷಾವಾರು ಪ್ರಾಂತ್ಯಗಳ ಪಾಡೇನು.'

'ನಾಳೆಯೂ ಭಾಷಾವಾರು ಪ್ರಾಂತ್ಯಗಳನ್ನೇ ಭಾರತವು ನಿಯೋಜಿಸಬೇಕಾಗುತ್ತದೆ. ಹಿಂದೂಸ್ಥಾನದ ನವ ರಾಜ್ಯಾಂಗ ರಚನೆಗೆ ಇದನ್ನು ಬಿಟ್ಟು ಬೇರೆ ಉಪಾಯವಿಲ್ಲವೆಂದು ನೆಹ್ರೂ ಸಮಿತಿಯವರು ಖಂಡಿತವಾಗಿ ಹೇಳಿದ್ದಾರೆ. ನಾವೀಗಲೇ ಎಚ್ಚರಗೊಂಡು ಕರ್ನಾಟಕ ಸಂಘಟನೆಯನ್ನು ಮಾಡಿಕೊಳ್ಳದಿದ್ದರೆ ಹಿಂದೆ ಕನ್ನಡ ನಾಡಿನ ಕೆಲಭಾಗಗಳನ್ನು ಬ್ರಿಟಿಷರಿಗೂ, ಕೆಲಭಾಗಗಳನ್ನು ನಿಜಾಮರಿಗೂ, ಕೆಲಭಾಗಗಳನ್ನು ಮರಾಟರಿಗೂ ಹಂಚಿಕೊಟ್ಟಂತೆ ಈಗಲೂ ತಮಿಳು, ತೆಲುಗು, ಮಲಯಾಳ, ಉರ್ದು ಮಾತನಾಡುವ ಜನಗಳಿಗೆ ಕನ್ನಡ ನಾಡನ್ನು ಹಂಚಿಕೊಡಬೇಕಾಗುತ್ತದೆ. ನೆರೆಯ ಪ್ರಾಂತ್ಯದವರು ಬ್ರಹನ್ಮಹಾರಾಷ್ಟ್ರ, ಬ್ರಹತ್ ಆಂಧ್ರ ಚಳುವಳಿಯನ್ನು ಹೂಡಿ ಆಕ್ರಮಣಶೀಲತೆಯನ್ನು ತೋರುತ್ತ ಬಂದಿದ್ದಾರೆ. ಬಳ್ಳಾರಿ ನಮ್ಮದೆಂದು ಹೇಳುತ್ತಿರುವ ಜನ ನಾಳೆ ಕೋಲಾರ ನಮ್ಮದೆಂದು ಹೇಳುತ್ತಾರೆ. ಬಸವನಗುಡಿಯಲ್ಲಿ ಕೆಲವು ಮದರಾಸಿನ ಲಾಯರುಗಳು ಮನೆಗಳನ್ನು ಕೊಂಡಿದ್ದಾರೆಂದು ಬೆಂಗಳೂರು ತಮಗೆ ಸೇರಬೇಕೆಂದು ತಮಿಳರು ಚಳುವಳಿ ಹೂಡಬಹುದು. ಅವುಗಳಿಗೆ ಅವಕಾಶವಾಗದಂತೆ ಕನ್ನಡಿಗರು ಈಗಿನಿಂದಲೇ ಎಚ್ಚರರಾಗಿರಬೇಕು.'

'ಈ ಬಗ್ಗೆ ನಿಮ್ಮ ನಿರ್ಧಾರವೇನು.'

'ನಮ್ಮ ಒಂದು ಅಂಗೈಯಗಲ ಭೂಮಿಯನ್ನೂ ನಾವು ಇತರರಿಗೆ ಬಿಟ್ಟು ಕೊಡಲು ಸಿದ್ಧವಾಗಿಲ್ಲ. ಹಾಗೆ ನಮ್ಮಿಂದ ಕಸುಗೊಳ್ಳಲು ಬರುವವರನ್ನು ಜೀವ ಒತ್ತೆಯಿಟ್ಟು ನಾವು ಎದುರಿಸುತ್ತೇವೆ. ನಮಗೆ ರಾಜ್ಯದಾಹವಿಲ್ಲ.

ನಮಗೆ ಪರರ ಒಂದಂಗುಲ ಭೂಮಿ ಬೇಡ. ಅವರ ಪಾಡಿಗೆ ಅವರು ಸುಖ ವಾಗಿರಲಿ. ನಾವು ಬಾಳಿ ಬದುಕಲು ಬಿಡಲಿ. ಸುಮ್ಮನೆ ನಮ್ಮ ಮನೆಗೆ ಕಾಲಿಟ್ಟು ನಮ್ಮನ್ನು ನಿರಾಶ್ರಿತರನ್ನಾಗಿ ಮಾಡುವ ಘಾತುಕತನ ಮಾತ್ರ ಬೇಡ.'

'ಇದು ನ್ಯಾಯವಾದ ಆಸೆಯೇ ಆಗಿದೆ. ಯಾರೂ ಇದಕ್ಕೆ ವಿರೋಧ ವನ್ನು ಸೂಚಿಸಲಾರರು.'

'ನಮ್ಮ ಆಂಧ್ರ, ಮಹಾರಾಷ್ಟ್ರ, ತಮಿಳು, ಮಲಯಾಳಿ ಮಿತ್ರರು ನನ್ನ ತತ್ವವನ್ನು ಒಪ್ಪಿಕೊಂಡರೆ ಯಾವ ಘರ್ಷಣೆಗೂ ಮಾರ್ಗವೇ ಇರುವುದಿಲ್ಲ. ನಾವೆಲ್ಲಾ ಅಣ್ಣ ತಮ್ಮಂದಿರಂತೆ, ಬಾಳುವ ಸುದಿನ ಬೇಗ ಬರಲಿ. ಇದೇ ನನ್ನ ಹಾರೈಕೆ.'

ರಾಯರ ನೆಟ್ಟ ನೋಟ, ಕನ್ನಡದ ಪುರೋಭಿವೃದ್ಧಿಯ ಬಗ್ಗೆ ಇದ್ದ ಶುಭ್ರ ದೃಷ್ಟಿ ನನ್ನ ಮನಸ್ಸಿಗೆ ಒಪ್ಪಿತು. ಅವರ ಅಪ್ಪಣೆ ತೆಗೆದುಕೊಂಡು ಹೊರಟೆ.



# ಸಾಹಿತ್ಯರತ್ನ

ಶ್ರೀಮಾನ್ ಕೃಷ್ಣರಾಯರು ಕಳೆದ ವರ್ಷ (೧೯೪೩) ನವೆಂಬರ್ ತಿಂಗಳಲ್ಲಿ ಸುಮಾರು ೩೦೦ ಪುಟಗಳ 'ಸಾಹಿತ್ಯರತ್ನ'ವೆಂಬ ಕಾದಂಬರಿಯನ್ನು ಪ್ರಕಟಿಸಿದರು. ಅದರ ಮೇಲೆ ಒಂದೇ ಸಮನಾಗಿ ಕಟುಟೀಕೆಗಳ ಸುರಿಮಳೆಯಾಯಿತು. ವಿಮರ್ಶೆಗಳನ್ನು ಓದುತ್ತ ಓದುತ್ತ ಇದರ ಹಿನ್ನೆಲೆಯೊಂದಿರಬೇಕು ಎಂದು ಯಾರಿಗಾದರೂ ಅನಿಸದಿರದು. ನನಗೂ ಹಾಗೆಯೇ ಅನ್ನಿಸಿತು. ಶ್ರೀ ರಾಯರನ್ನು ಕಂಡು ಈ ವಿಷಯ ಚರ್ಚಿಸಲು ನಿರ್ಧರಿಸಿ ಅವರ ಮನೆಯ ಕಡೆಗೆ ಸಾಗಿದೆ.

ರಾಯರು ವೆರಾಂಡಾದಲ್ಲಿ ಆರಾಮಾಸನದ ಮೇಲೆ ಮಲಗಿದ್ದರು. ನಿದ್ರೆ ಮಾಡುತ್ತಿರಬಹುದೆಂದು ಭಾವಿಸಿ ಹೊರಡಲನುವಾದೆ. ಬಾಗಿಲು ಸಪ್ಪಳವಾಯಿತು. ಕಣ್ದೆರೆದರು.

'ಬನ್ನಿ. ಏಕೆ ಹೊರಟುಬಿಟ್ಟರಿ.'

'ನೀವು ನಿದ್ರೆಮಾಡುತ್ತಿದ್ದ ಹಾಗಿತ್ತು. ನಿದ್ರಾಭಂಗ ಮಾಡಬಾರದೆಂದು ಹೊರಟಿದ್ದೆ.'

'ಅದು ನಿದ್ರೆಯಲ್ಲ. ಹಲವಾರು ಚಿಂತೆಗಳಿಂದ ಮನಸ್ಸು ವಿಚಲವಾಗುತ್ತದೆ. ಶಾಂತಿಯಿಂದ ಚೇತನಗಳನ್ನು ಒಳಕ್ಕೆ ಎಳೆದುಕೊಳ್ಳಬೇಕಾಗುತ್ತದೆ.'

'ನಾನು ಬಂದದ್ದು ಅಕಾಲಿಕವಾಯಿತೇ?'

'ಇಲ್ಲ. ಕೂಡಿ.'

'ಏನು ಚಿಂತೆ ಕೇಳಬಹುದೇ?'

'ಏನೆಂದು ಹೇಳಲಿ. ನಮ್ಮ ನಾಡವರ ಅನೈಕಮತ್ಯ, ಆಲಸ್ಯ, ಕರ್ತವ್ಯ ಪರಾಙ್ಮುಖತೆಗಳು ಸಾಲದೇ—ಬಸವಣ್ಣನವರು ಹೇಳಿದಂತೆ 'ಹಾಸಲುಂಟು ಹೊದೆಯಲುಂಟು.'

'ನಿಜ. ನಮ್ಮದು ಕೌರವಪಾಳ್ಯವಾಗಿ ಹೋಗಿದೆ.'

‘ಸಂಘಶಕ್ತಿಗೂ ಕನ್ನಡಿಗರಿಗೂ ಬದ್ಧದ್ವೇಷವೆಂದು ಕಾಣುತ್ತದೆ.’

‘ಕರ್ನಾಟಕದಲ್ಲಿ ಪ್ರತಿಯೊಬ್ಬರೂ ನಾಯಕರೇ. ಇನ್ನು ಅನುಯಾಯಿಗಳನ್ನು ಎಲ್ಲಿಂದ ತರೋಣ.’

‘ಈ ನಾಯಕತ್ವ ಯಾವ ರಚನಾತ್ಮಕ ಕಾರ್ಯಕ್ರಮದ ಕಡೆಗೂ ಲಕ್ಷ್ಯ ವಿಡುವುದಿಲ್ಲ. ಆತ್ಮಸ್ತುತಿ, ಪರನಿಂದೆ ಎರಡರಲ್ಲಿ ಎಲ್ಲವೂ ಮುಗಿಯಬೇಕು.’

‘ಸಾಹಿತ್ಯರಂಗದಲ್ಲಿಯೂ ಇದೇ ಗತಿಯೆನ್ನುವಿರಾ?’

‘ಸಾಹಿತ್ಯರಂಗದಲ್ಲಿಯೇ ಇದರ ತಾಂಡವ ಹೆಚ್ಚು. ಸಾಧನ, ಅಧ್ಯಯನ, ಧ್ಯಾಸಗಳೊಂದೂ ನಮ್ಮವರಿಗೆ ಬೇಕಿಲ್ಲ. ಅವರಿಗೆ ಬೇಕಾಗಿರುವುದು “ಏನಕೇನ ಪ್ರಕಾರೇಣ ಪ್ರಸಿದ್ಧ ಪುರುಷೋಭವಃ”.

‘ನಿಮ್ಮ ಮೇಲೆ ಬರುತ್ತಿರುವ ಟೀಕೆಗಳಿಗೆ ಅನ್ವಯಿಸಿ ಹೇಳುವಿರಾ?’

‘ನನ್ನ ಮೇಲಿನ ಟೀಕೆಗಳಿಗೂ ಇದು ಅನ್ವಯಿಸುತ್ತೆ—ಎಲ್ಲಾ ಟೀಕೆಗಳಿಗೂ ಹೆಚ್ಚು ಕಡಿಮೆ ಅನ್ವಯಿಸುತ್ತದೆ.’

‘ನಿಮ್ಮ ಮೇಲೆ ಬಂದಿರುವ ಟೀಕೆಗಳ ಬಗ್ಗೆ ಮಾತಾಡುವ ಎಂತಲೇ ಬಂದೆ.’

‘ಬಿಡಿ. ಅದೇನು ದೊಡ್ಡ ವಿಷಯ. ಬೇರೆ ವಿಷಯ ಮಾತಾಡೋಣ.’

‘ಇಲ್ಲ, ಈ ಬಗ್ಗೆ ಒಮ್ಮೆ ಕೂಲಂಕಷ ಚರ್ಚೆಯಾದರೆ ಒಳ್ಳೆಯದು.’

‘ನಿಮ್ಮ ಇಷ್ಟ.’

‘ಸಾಹಿತ್ಯರತ್ನದ ಮೇಲೆ ಬಂದಿರುವ ವಿಮರ್ಶೆಗಳನ್ನೆಲ್ಲ ನೋಡಿರುವಿರಾ.’

‘ಕೆಲವನ್ನು ನೋಡಿದ್ದೇನೆ.’

‘ಇದನ್ನು ಕನ್ನಡಿಗರ ವಿಮರ್ಶನ ನೈಪುಣ್ಯದ ಒರೆಗಲ್ಲಾಗಿ ತೆಗೆದುಕೊಳ್ಳಬಹುದಲ್ಲವೇ?’

‘ಹಾಗಾದರೆ ನೀವು ನನ್ನ ಹಿಂದಿನ ಗ್ರಂಥಗಳ ಮೇಲೆ ಬಂದಿರುವ ವಿಮರ್ಶೆಗಳನ್ನು ನೋಡಿಲ್ಲ.’

‘ಯಾವ ಪುಸ್ತಕದ ಮೇಲೆ.’

‘ನನ್ನ ಜೀವನಯಾತ್ರೆ—ಉದಯರಾಗ—ಆಹುತಿ—ರಾಜಾ ರವಿವರ್ಮ ಇತ್ಯಾದಿ ಗ್ರಂಥಗಳ ಮೇಲೆ.’

'ಸ್ಥೂಲವಾಗಿ ನೋಡಿದ್ದೇನೆ.'

'ಅದೇ ಮನೋಭಾವ ಇಂದಿಗೂ ಇದೆ. ಮಡಿ ಮನೋಭಾವದ ಜನಗಳಿಗೆ ನನ್ನ ಪುಸ್ತಕಗಳು ಹಿಡಿಸುವುದಿಲ್ಲ, ಶುಷ್ಕ ಸಿದ್ಧಾಂತವಾದಿಗಳಿಗೂ ಹಿಡಿಸುವುದಿಲ್ಲ. ನಾನು ಬರೆಯುವುದು ವಿಚಾರವಾದಿಗಳಿಗೆ. ಅವರ ಸಂಖ್ಯೆ ಇನ್ನೂ ಬೆಳೆಯಬೇಕು.'

'ಒಂದು ಗುಂಪಿನವರು ಬರೆಯುವ ಪ್ರತಿಯೊಂದು ಪುಸ್ತಕವೂ ಮಹಾಕಾವ್ಯವೆಂದು ಡಂಗುರ ಸಾರಿಕೊಂಡೇ ಬರುತ್ತದಲ್ಲಾ.'

'ಹಾಗೇ ನನ್ನ ಪ್ರತಿಯೊಂದು ಪುಸ್ತಕವೂ ಭರ್ತ್ಸನೆಯ ಸುರಿಮಳೆಯನ್ನು ಅನುಭವಿಸಿಕೊಂಡೇ ಬರುತ್ತದೆ.'

'ಹತ್ತು ವರ್ಷದಲ್ಲಿ ಡಂಗುರ ಸಾರಿಸಿಕೊಂಡು ಬಂದ ಅನೇಕಾನೇಕ ಪುಸ್ತಕಗಳ ಹೆಸರೂ ಉಳಿದಿಲ್ಲವಲ್ಲಾ.'

'ಗ್ರಂಥ ಉಳಿಯುವುದು ಮಿತ್ರರ ಅನುಯಾಯಿಗಳ ಹೊಗಳಿಕೆಯ ಮೇಲೆಂದು ಭಾವಿಸಿದ್ದೀರೇನು? ಕೆಲವು ಅನಂತ ಮಾನದಂಡಗಳು ಸಾಹಿತ್ಯದಲ್ಲಿಯೂ ಇವೆ. ಅವುಗಳನ್ನು ಪುಸ್ತಕ ಪೂರೈಸದಿದ್ದರೆ ಅದು ಅಕಾಲ ಮೃತ್ಯುವಿಗೆ ತುತ್ತಾಗಲೇ ಬೇಕು.'

'ನೀವು ಬರೆಯುವುದೆಲ್ಲಾ ಸಾಮಾನ್ಯ ಓದುಗನಿಗೆ ಅಪ್ರಿಯವಾದವುಗಳೇನು?'

'ಸಾಮಾನ್ಯ ಓದುಗನನ್ನು ನಮ್ಮ ಸಾಹಿತ್ಯ ಸಮ್ರಾಟರು ಅಜ್ಞಾನಾಂಧಕಾರದಲ್ಲಿ ಇಡಲು ಪ್ರಯತ್ನಿಸುತ್ತಾರೆ. ಅಪು ಕೊಟ್ಟ ಹಾಗೆ ಅವನಿಗೆ ಜನ್ಮಾಂತರ ವಿಷಯಗಳನ್ನೇ ಬಣ್ಣ ಕಟ್ಟಿ ಮತ್ತೆ ಮತ್ತೆ ಹೊಸದು ಮಾಡಿ ಹೇಳುತ್ತಾರೆ. ಹಳಸಿದ ಸಾರಿಗೆ ಒಗ್ಗರಣೆ ಕೊಟ್ಟ ಹಾಗೆ. ವಿಚಾರವನ್ನು ಕೆರಳಿಸುವ ಯಾವ ವಿಷಯ ಬಂದರೂ ಸಂಪ್ರದಾಯಸ್ಥರು ಅದರ ಮೇಲೆ ಹರಿಹಾಯುತ್ತಾರೆ. ಏಕೆಂದರೆ ಸಾಮಾನ್ಯ ಓದುಗ ಒಮ್ಮೆ ಎಚ್ಚರಗೊಂಡನೆಂದರೆ ಸಂಪ್ರದಾಯಸ್ಥರು ಗಂಟು ಮೂಟೆ ಕಟ್ಟಬೇಕಾಗುತ್ತದೆ.'

'ನಿಮ್ಮ ಎರಡು ದಶಕಗಳ ಪ್ರಯತ್ನದಿಂದ ಏನಾದರೂ ಸಾಫಲ್ಯವುಂಟಾಗಿದೆಯೇ.'

'ಈ ಎರಡು ದಶಕಗಳಲ್ಲಿ ನನ್ನ ಓದುಗರ ಸಂಖ್ಯೆ ಬಹಳ ಬೆಳೆದಿದೆ. ಕನ್ನಡ ಓದುಗರ ಸಂಖ್ಯೆ ಹೆಚ್ಚಿದಂತೆ ಅವರಲ್ಲಿ ವಿಚಾರಶಕ್ತಿಯೂ ಹೆಚ್ಚುತ್ತ ಬಂದಿದೆ. ಸಂಪ್ರದಾಯಸ್ಥರು ಕೂಡ ನನ್ನ ಗ್ರಂಥಗಳನ್ನು ಆತುರದಿಂದ ಓದುತ್ತಾರೆ. ಅಲ್ಲದೆ ನಾನೂ ಹತ್ತಿಪ್ಪತ್ತು ವರ್ಷಗಳ ಕೆಳಗೆ ಹೇಳಿದ ಮಾತು ಗಳನ್ನು ಇಂದು ತಮ್ಮದುಮಾಡಿಕೊಂಡು ಹಿರಿಯರು ಹೇಳುತ್ತಿದ್ದಾರೆ. ಜನತೆ ಯಲ್ಲಿ ಒಮ್ಮೆ ಬಿತ್ತಿದ ಕ್ರಾಂತಿಬೀಜ ಇಂದು ಚಿಗುರೊಡೆಯುತ್ತಿರುವುದು ಸ್ಪಷ್ಟ ವಾಗಿ ಕಂಡುಬರುತ್ತಿದೆ.'

'ನಿಮಗೂ ಸಂಪ್ರದಾಯಸ್ಥರಿಗೂ ಇರುವ ಮೂಲ ವ್ಯತ್ಯಾಸವೇನು?'

'ಅವರದು ಒಂದು ಗುಂಪನ್ನು ರಮಿಸಿ, ಜನತೆಯನ್ನು ಅಜ್ಞಾನ ನಿದ್ರಾಸಕ್ತರನ್ನಾಗಿಮಾಡುವ ಸಾಹಿತ್ಯ. ನಾನು ಯಾವ ಗುಂಪನ್ನೂ ಉದ್ದೇಶಿಸಿ ಮಾತನಾಡುವುದಿಲ್ಲ. ಹಿಂದುಸ್ಥಾನದ ಬಹುಸಂಖ್ಯಾತರೆಂದರೆ ಸಹಸ್ರಾರು ಹಳ್ಳಿ ಗಳಲ್ಲಿ ವಾಸಿಸುವ ಕೋಟ್ಯಾಂತರ ಮಂದಿ ಅನಕ್ಷರಜ್ಞರಾದ **ಹಳ್ಳಿಗರು,** ಪಟ್ಟಣ ಗಳಲ್ಲಿ ತಮ್ಮ ದೇಹವನ್ನು ತೇಯುವ **ಕೂಲಿಕಾರರು,** ಸಿದ್ಧಾಂತಗಳಿಗೆ ಶರಣು ಹೋಗದ ವಿಚಾರಪ್ರೇಮಿಗಳಾದ ವಿದ್ಯಾರ್ಥಿಗಳು ಮತ್ತು ಬೇರೆ ಬೇರೆ ಕಾಯಕ ಮಾಡುವ ಶ್ರಮಜೀವಿಗಳು. ಉಳಿದವರೆಂದರೆ ವರ್ತಕರು, ಸರ್ಕಾರಿ ಅಧಿಕಾರಿ ಗಳು, ಯಾರೊ ಕೂಡಿಟ್ಟದ್ದನ್ನು ಕೂತು ಉಣ್ಣುವ ಶ್ರೀಮಂತರು. ಇವರುಗಳಿಗೆ ಹೇಳಿದರೂ ಒಂದೇ ಬಿಟ್ಟರೂ ಒಂದೇ. ನನ್ನ ಲಕ್ಷ್ಯ ಕೂಲಿಗಾರರು, ಹಳ್ಳಿಗರು, ಶ್ರಮಜೀವಿಗಳು, ವಿದ್ಯಾರ್ಥಿಗಳ ಕಡೆಗೆ; ಸಂಪ್ರದಾಯಸ್ಥರ ಲಕ್ಷ್ಯ ಸರ್ಕಾರಿ ಅಧಿಕಾರಿಗಳು, ಶ್ರೀಮಂತರು, ವರ್ತಕರ ಕಡೆಗೆ. ಸಣ್ಣಪುಟ್ಟ ವ್ಯಾಪಾರ ಮಾಡುವವನೂ ಶ್ರಮಜೀವಿಯೆಂಬುದನ್ನು ತಾವು ಮರೆಯಬೇಡಿ.'

'ಒರಡೂ ಎರಡು ಭಿನ್ನಸಂಪ್ರದಾಯಗಳಾದ ಹಾಗೆ ಆಯಿತು. ಒಬ್ಬೊ ಬ್ಬರು ಒಂದೊಂದು ರೀತಿ ಶ್ರಮಿಸಲಿ. ಇದರಲ್ಲಿ ಪರಸ್ಪರ ಘರ್ಷಣೆಗೆ ಮಾರ್ಗವೇ ಇಲ್ಲವಲ್ಲಾ.'

'ನಿಮ್ಮ ವಾದದಲ್ಲಿ ಎರಡು ತಪ್ಪಿದೆ. ಮೊದಲನೆಯದಾಗಿ ಜನ ಬಾಹುಳ್ಯವನ್ನು ಮುಟ್ಟದ ಸಾಹಿತ್ಯ ಸಾಹಿತ್ಯವೇ ಅಲ್ಲ ನನ್ನ ದೃಷ್ಟಿಯಲ್ಲಿ. ಎರಡನೆಯದಾಗಿ ಸಂಪ್ರದಾಯಪ್ರಿಯರ ಗುಂಪೊಂದು ಈಗ ಸುಮಾರು ಎರಡು ದಶಕಗಳ ಕಾಲ ಕರ್ನಾಟಕದಲ್ಲಿ ಸರ್ವಾಧಿಕಾರ ನಡಸಿತಲ್ಲ ಅದರ ಇತಿಹಾಸ

ವನ್ನು ಒಳಹೊಕ್ಕು ನೋಡಬೇಕು. ಅದು ತತ್ವಗಳ ಮೇಲೆ ಸ್ಥಾಪಿತವಾದ ಗುಂಪಲ್ಲ, ವ್ಯಕ್ತಿಗಳ ಮೇಲೆ ಸ್ಥಾಪಿತವಾದ ಗುಂಪು. ಆ ವ್ಯಕ್ತಿಗಳಾದರೂ ಸಾಹಿತ್ಯ ಒಂದು ಕ್ರೀಡೆಯೆಂದೂ, ಹತ್ತುಕಡೆ ಹೂಮಾಲೆ ಪಡೆಯುವ ಸಾಧನವೆಂದು ಭಾವಿಸಿದವರು. ನಾನು ಮಂಡಿಸುತ್ತಿರುವ ಪ್ರಗತಿಶೀಲಸಾಹಿತ್ಯ ಭದ್ರವಾದ ತತ್ವದ ಬುನಾದಿಯ ಮೇಲೆ ನಿಂತಿದೆ. ಅದಕ್ಕೇ ನನ್ನ ಕೃತಿಗಳ ಮೇಲೆ ಟೀಕೆಗಳ ಖಂಡನೆಗಳ ಸುರಿಮಳೆ.'

'ಸಾಹಿತ್ಯರತ್ನ ಒಂದು ಸುಂದರವಾದ ಕಾದಂಬರಿ. ಯಾವ ಮತದವರನ್ನೂ ಅದು ಮೋಹಗೊಳಿಸದೆ ಬಿಡುವುದಿಲ್ಲ. ಎಲ್ಲರ ಮನಸ್ಸಿನಲ್ಲಿಯೂ ಒಂದಲ್ಲ ಒಂದು ತೆರನಲ್ಲಿ ವಿಚಾರ ಪ್ರಚೋದನೆಯನ್ನುಂಟುಮಾಡುತ್ತದೆ. ಪ್ರಗತಿಶೀಲರು ತಮ್ಮ ವಿಚಾರಗಳನ್ನು ಮಂಡಿಸುವ ಗ್ರಂಥವೆಂದು ಪುರಸ್ಕರಿಸಿದರೆ ಸಂಪ್ರದಾಯಪ್ರಿಯರು ಅದರ ಕಲಾವಂತಿಕೆಯನ್ನು ಕಂಡು ಮೆಚ್ಚಬಹುದು.'

'ನೀವು ನಮ್ಮ ಜನಗಳಿಂದ ಬಹಳ ಸದ್ಗುಣಗಳನ್ನು ನಿರೀಕ್ಷಿಸುತ್ತೀರಿ. ಸಾಹಿತ್ಯರತ್ನದ ಬಗ್ಗೆ ಬಂದಿರುವ ಆಕ್ಷೇಪಣೆಗಳನ್ನು ಕೊಂಚ ಪರಿಶೀಲಿಸೋಣ. ಶ್ರೀ ಕೋ. ಶಿ. ಕಾರಂತರು 'ಪ್ರಬುದ್ಧ ಕರ್ನಾಟಕ'ದಲ್ಲಿ ವಿಮರ್ಶೆಮಾಡಿದ್ದಾರೆ. ಕಥೆಯನ್ನು ನಿರ್ಮತ್ಸರದಿಂದ ಹೇಳುವಷ್ಟು ಸಂಯಮವೂ ಇವರಲ್ಲಿಲ್ಲ. ಮೊದಲಿಂದ ಕೊನೆಯವರೆಗೂ ತಿರಸ್ಕಾರ, ಅವಹೇಳನಗಳಲ್ಲಿ ತೊಡಗಿದ್ದಾರೆ. Cheap gibing ದೃಷ್ಟಾಂತ ಬೇಕೆಂದರೆ ಕಾರಂತರ ವಿಮರ್ಶೆಯೇ ಸಾಕು.'

'ಅವರ ಆಕ್ಷೇಪಣೆಗಳು ಯಾವುವು?'

'ಗ್ರಂಥ ನೀತಿಯನ್ನು ಸಾರುತ್ತಿಲ್ಲವಂತೆ. 'ಸೂಳೆಯ ಸಂಸಾರ' ಬರೆದ ಕಾರಂತರು ಇಂದು ಸಂಪ್ರದಾಯಸ್ಥರ ಪುರೋಹಿತರಾಗಿದ್ದಾರೆ. ಇವರ ಕಣ್ಣಲ್ಲಿ ಯಾವದು ಅನೀತಿ ಇಲ್ಲಿರಾ. ನನ್ನ ನಾಯಕ ಮೂರ್ತಿ ಹೆಂಡತಿಯನ್ನು ಬಿಟ್ಟು ಶಾಲಾ ಉಪಾಧ್ಯಾಯಿನಿಯಾದ ಲಲಿತಮ್ಮನಲ್ಲಿ ಅನುರಕ್ತನಾಗುವುದು. ನನ್ನ ಕಥಾಸರಣಿಯಲ್ಲಿ ಪಂಡಿತರಿಗೆ ಬಹಳ ಅನ್ಯಾಯವಾಗಿದೆಯಂತೆ. ಒಂದು ಕಲಾಕೃತಿಯ ಮೇಲೆ ವಿಮರ್ಶಕ ತನ್ನ ಭಾವನೆಗಳನ್ನು ಯಾವಾಗ ಮೂಡು ನೆಯೋ ಆಗ ವಿಮರ್ಶನ ಅಧಿಕಾರವನ್ನು ಅವನು ಕಳೆದುಕೊಳ್ಳುತ್ತಾನೆ. ಇನ್ನು ಹೆಂಡತಿ, ಲಲಿತಮ್ಮರ ಪ್ರಸಂಗ. ಇದನ್ನೇ ಅತ್ಯಂತ ನೀತಿಯುತ

ನಿರೂಪಣೆ ಎಂದು ಕೆಲವು ಹಿರಿಯರು ನನ್ನಲ್ಲಿ ಹೇಳಿದ್ದಾರೆ. ಮನಸ್ಸಿಗೆ ವಿರುದ್ಧವಾಗಿ ಲಗ್ನವಾಗಿ, ಸಾಗದ ಬಾಳನ್ನು ದೂಡುವುದಕ್ಕಿಂತಲೂ ಅದನ್ನು ಮುರಿಯುವುದು ಲೇಸು. ಗಂಡ ಹೆಂಡತಿ ಪರಸ್ಪರ ಸೆರೆಯಾಳುಗಳಾಗಿ ಬಾಳು ವುದಕ್ಕಿಂತಲೂ ಒಬ್ಬರನ್ನೊಬ್ಬರು ಬಿಟ್ಟು ತಮ್ಮ ಸಹಜಗುಣದ ದಾರಿಯಲ್ಲಿ ಹೋಗುವುದು ಲೇಸು. ಮದುವೆಯೆಂದರೇನು? ಅದು ಪುರೋಹಿತನ ನಾಲ್ಕು ಅರ್ಥವಿಲ್ಲದ ಮಂತ್ರಗಳಿಂದ ಪರಿಶುದ್ಧಗೊಳ್ಳುತ್ತದೆಯೇ? ಎರಡು ಆತ್ಮಗಳು ಸಾಹಜಿಕವಾಗಿ ಕೂಡದಿದ್ದಾಗ ಅದನ್ನು ಯಾವ ಧರ್ಮ, ಸಮಾಜ ಪುರೋಹಿತರು ಕೂಡಿಸಬಲ್ಲರು.

ಎರಡನೆಯ ಆಕ್ಷೇಪಣೆ. 'ಈ ಸಾಹಿತಿಯು ಯಾವ ಕಂಡುಂಡ ಬಾಳೂ ಇಲ್ಲಿ ಚಿತ್ರಿತವಾಗಿಲ್ಲ. ಅವನು ಸಾಹಿತಿಯಾಗಿ ಬರೆದ ಗ್ರಂಥಗಳ ಹೆಸರು ನಮ್ಮನ್ನು ಇದಿರಿಸುತ್ತಿವೆಯಾದರೂ, ಅವೇನೆಂದು ಹೆಸರುಗಳಿಂದಲೇ ತಿಳಿಯ ಬೇಕಾಗುವುದು. ಯಾವ ಗ್ರಂಥಕ್ಕೆ ಯಾವ ಅನುಭವ ಹಿನ್ನೆಲೆ, ಸಾಹಿತಿಯ ಮನೋಧರ್ಮ ಅದರಿಂದ ಹೇಗೆ ಪರಿಣಾಮಗೊಂಡಿತು, ಕೊನೆಯ ಪಕ್ಷಕ್ಕೆ 'ಅದೆಂತಹ ಬರೆಹ' ಎಂಬುದಾದರೂ ತಿಳಿಸಿದ್ದರೆ ಆಗುತ್ತಿತ್ತು' ಎಂದು ಹೇಳು ತ್ತಾರೆ. ಇದು ಹಳಸಿದ ಟೀಕೆ. ನಾನು ಉದಯರಾಗ ಬರೆದಾಗ ಚಿತ್ರಕಲೆಯ ತಂತ್ರವನ್ನು ವರ್ಣಿಸಲಿಲ್ಲವೆಂದು ಕೆಲವರು ಆಕ್ಷೇಪಿಸಿದರು; ಸಂಧ್ಯಾರಾಗ ಬರೆದಾಗ ಸಂಗೀತಶಾಸ್ತ್ರ ವಿಮರ್ಶೆ ಮಾಡಲಿಲ್ಲವೆಂದು ಮತ್ತೆ ಕೆಲವರ ಆಕ್ಷೇಪ. ಈಗ ಕಾರಂತರು ನನ್ನ ನಾಯಕ ಬರೆದ ಗ್ರಂಥಗಳ ವಸ್ತು ಕೊಡಲಿಲ್ಲವೆಂದು ಆಕ್ಷೇಪಿಸುತ್ತಾರೆ. ಒಂದು ಕಾದಂಬರಿಯೊಳಗೆ ನಾನು ಮತ್ತೆ ಹತ್ತು ಕಾದಂಬರಿ, ಹದಿನೈದು ನಾಟಕ, ಹಲವಾರು ಸಣ್ಣ ಕಥೆಗಳನ್ನು ಅಡಕಮಾಡಿ ಒಂದು ಬೃಹದ್ಗ್ರಂಥ ಮಾಡಬೇಕಾಗಿತ್ತು ಎಂದು ತಜ್ಞರಾದ ಕಾರಂತರ ಸಲಹೆ. ಸಂದರ್ಭೋಚಿತವಾಗಿ ನಾನು ಕೊಟ್ಟಿರುವ ಗ್ರಂಥಗಳ ಹೆಸರುಗಳಿಂದಲೂ ಸನ್ನಿವೇಶಗಳಿಂದಲೂ ಅವು ಏನು ಎಂದು ವಾಚಕರು ಊಹಿಸಿಕೊಳ್ಳಬಹುದು. '೨೫ ನೆಯ ಶತಮಾನ' – 'ಬಿಬೆಯೆಷ್ಟು' ಗ್ರಂಥಗಳ ಸೂಕ್ಷ್ಮ ಪರಿಚಯವನ್ನು ಕೊಟ್ಟಿದ್ದೇನೆ. 'ತೀರ ಕೊನೆಯಲ್ಲಿ ಬರುವ, ಅವನು ಗಿರಣಿ ಕಾಮಗಾರರ ಬಾಳಿನಲ್ಲಿ ಬೆರೆತ ಒಂದೆರಡು ಘಟನೆಗಳನ್ನು ಬಿಟ್ಟರೆ ಈ ಸಾಹಿತಿಯ ಯಾವ

'ಕಂಡುಂಡ ಬಾಳೂ' ಚಿತ್ರಿತವಾಗಿಲ್ಲ' ಎಂದು ಕಾರಂತರ ಹೇಳಿಕೆ. ಈ ಗಿರಣಿ ಕಾಮಗಾರರ ಸಂಬಂಧದ ಪ್ರಸಂಗ ಗ್ರಂಥದ ಮೂರನೆಯ ಒಂದು ಭಾಗವಿದೆ. ಸಾಹಿತ್ಯರತ್ನವನ್ನು ಕಾರಂತರು ಅವಸರದಲ್ಲಿ ಓದಿ ಮುಗಿಸಿ ಟೀಕೆ ಮಾಡುವ ತಮ್ಮ ಚಾಪಲ್ಯವನು ತೀರಿಸಿಕೊಂಡಿದ್ದಾರೆ.'

'ಜಯಂತಿಯಲ್ಲಿ 'ವಿಹಾರಿ'ಗಳು ಎರಡು ಆಕ್ಷೇಪಣೆಗಳನ್ನೆತ್ತಿದ್ದಾರೆ. ೧. ಕಥೆಗಾದರೂ ಒಂದು 'ಅರ್ಥ' ಇರಬೇಕಲ್ಲವೇ? ೨. ಮಧ್ಯವರ್ತಿ ಪಾತ್ರವಾದ ಮೂರ್ತಿಗೆ ಯಾವ ವ್ಯಕ್ತಿತ್ವವೂ ಇಲ್ಲ. 'ಆದರ್ಶಗಳ' ನಿರ್ಜೀವ ಹೊರೆಯಾಗಿ ನಿಂತಿದ್ದಾನೆ. ಇದಕ್ಕೇನು ಹೇಳುವಿರಿ?'

'ಕಾದಂಬರಿಯ ಅರ್ಥವನ್ನು ಮುನ್ನುಡಿಯಲ್ಲಿ ನಾನು ಹೇಳಿಯೇ ಇದ್ದೇನೆ. ಗುರಿಬದ್ಧವಾದ ಜೀವನದ ಎದುರು ಬರುವ ಸಮಸ್ಯೆಗಳು, ಅಡ್ಡಿ ಆತಂಕಗಳನ್ನು ಒಬ್ಬ ಸಾಹಿತಿ ಹೇಗೆ ಎದುರಿಸಿದ ಎನ್ನುವುದೇ ಇದರ ಕಥಾವಸ್ತು.' ಸಾಹಿತ್ಯರತ್ನದ ನಾಯಕ ಮೂರ್ತಿ ಎದುರಿಸಿದ ರೀತಿ ನೀತಿಗಳು ಕೆಲವರಿಗೆ ಒಪ್ಪಿಗೆಯಾಗಬಹುದು, ಕೆಲವರಿಗೆ ಒಪ್ಪಿಗೆಯಾಗದಿರಬಹುದು. ಅದು ಗೌಣ. ಅವನ ಜೀವನದಲ್ಲಿ ಸತತವಾಗಿ ಕಂಡುಬಂದಿರುವ ಸಾಧನಾಕಾಂಕ್ಷೆ, ಅದಕ್ಕೆ ದುಡಿಯುವ ಅವನ ನಿಷ್ಠೆ ಮುಖ್ಯ. ಲಲಿತಮ್ಮನನ್ನು ಕಟ್ಟಿಕೊಂಡದ್ದರಿಂದ ಅವನ ಆದರ್ಶ ಸಾಧಿಸಿತೇ ಎಂದು ವಿಹಾರಿಗಳು ಅಣಕವಾಡಿದ್ದಾರೆ. ಸುಹೃದಯತೆ ಎಲ್ಲ ಕಲೆಗಳ ತಾಯಿ. ಅದರ ಅಮೃತಧಾರೆಯಿರದಿದ್ದರೆ ಕಲೆಗಳು ಕಲಾವಿದರು ವರ್ಧಿಸುವುದಿಲ್ಲ ನಿಸರ್ಗ ಮೂರ್ತಿಗೆ ಲಲಿತಮ್ಮನಲ್ಲಿ ಆ ಸುಹೃದಯತೆಯನ್ನೊದಗಿಸಿತು. ಲಲಿತಮ್ಮನನ್ನು ಕಟ್ಟಿಕೊಳ್ಳುವುದೇ ಅವನ ಆದರ್ಶವಲ್ಲ. ಅವಳು ಅವನ ಬಾಳಿನ ತೈಲವಾಗಿ ಕಥೆಯಲ್ಲಿ ನಡೆದಿದ್ದಾಳೆ. ಅವಳ ಅಂತಃಕರಣ ಮೂರ್ತಿಯನ್ನು ಒಬ್ಬ ಮನುಷ್ಯನನ್ನಾಗಿ ನಿಲ್ಲಿಸಿತು. ಲಲಿತೆ ಮೂರ್ತಿಯ ಬಾಳಿನಲ್ಲಿ ಸುಳಿಯದಿದ್ದರೆ ಅದೊಂದು ಒಡೆದ ನೌಕೆಯಾಗುತ್ತಿತ್ತು. ಅವನು 'ವಿಹಾರಿ'ಗಳು ಊಹಿಸುವಂತೆ ಆದರ್ಶಗಳ ನಿಜವಾದ ಹೊರೆಯುಲ್ಲ. ಅವನು ತನ್ನ ಆದರ್ಶವನ್ನು ಸಾಧಿಸಿದನೊ ಬಿಟ್ಟನೊ ನಾನು ಬಣ್ಣಿಸಹೋಗಿಲ್ಲ. ಅವನ ದುಡಿಮೆಯ ಫಲವನ್ನು ಎತ್ತಿ ಹೇಳುವುದು ಕಂದಾಚಾರದ ಪದ್ಧತಿ. ನನಗೆ ಬೇಕಾಗಿರುವುದು ಅವನ ಸಾಧನ ಸಾಹಸ.

ತನ್ನ ಆದರ್ಶಸಾಧನೆಗೆ ಅವನು ಮನೆಬಿಡುತ್ತಾನೆ, ಕೈಹಿಡಿದ ಹೆಂಡತಿಯನ್ನು ಬಿಡುತ್ತಾನೆ, ಪರವೂರಿನಲ್ಲಿ ಕಾಣದೆ ತೊಳಲುತ್ತಾನೆ. ಲೋಕದ ಕಣ್ಣಿನಲ್ಲಿ ಅನೀತಿಯೆನಿಸಿಕೊಳ್ಳುವ ಲಲಿತಮ್ಮನ ಸ್ನೇಹ ವ್ಯವಹಾರವನ್ನು ಮಾಡುತ್ತಾನೆ. ಆದರ್ಶವೇ ಒಂದು ಹೊರೆ. ಅದನ್ನು ನೀಗಿಸುವ ಸಾಮರ್ಥ್ಯವನ್ನು ಮೂರ್ತಿ ಚೆನ್ನಾಗಿ ನಿರ್ವಹಿಸಿದ್ದಾನೆ. ತನ್ನ ಧ್ಯೇಯಕ್ಕನುಗುಣವಾದ ಬಾಳುವೆಯನ್ನು ನಡಸಲು ಅವನು ತೋರಿಸಿರುವ ಸ್ಥೈರ್ಯ ಸಾಮಾನ್ಯವಾದುದಲ್ಲ.'

'ಪಿಶಾಚಿಗಳ ವಿಮರ್ಶೆ ಉತ್ತೇಜಕವಲ್ಲದಿದ್ದರೂ ತರ್ಕಶುದ್ಧವಾಗಿದೆ ಯಲ್ಲವೇ?'

'ಸಂದೇಹವೇನು. ಗ್ರಂಥ ತಮ್ಮ ಮನಸ್ಸಿನ ಮೇಲೆ ಉಂಟುಮಾಡಿದ ಪರಿಣಾಮವನ್ನು ಅವರು ಬರೆದಿದ್ದಾರೆ, ವಿಮರ್ಶೆ ಎಷ್ಟೇ ಖಂಡನಾತ್ಮಕ ವಾಗಿದ್ದರೂ ನನಗೆ ದುಃಖವಿಲ್ಲ. ಸತ್ಯವಾದ ಭಿನ್ನಾಭಿಪ್ರಾಯಗಳನ್ನು ನಾವು ಗೌರವಿಸಲೇ ಬೇಕು. ಅಂತಹ ವಿಚಾರವಾದಿಗಳೊಂದಿಗೆ ಚರ್ಚೆಮಾಡಿ ಅವರನ್ನು ನಮ್ಮ ದೃಷ್ಟಿಯತ್ತ ತಿರುಗಿಸುವುದೂ ಕಷ್ಟಸಾಧ್ಯವಲ್ಲ. ಆದರೆ 'ಮಾತೃಭೂಮಿ'ಯಲ್ಲಿ ಪ್ರಕಟವಾಗಿರುವ ಪಾನ್ವಾಲಾ ಅವರ ಈ ಮಹಾ ಕ್ಯವನ್ನು ನೋಡಿ.

'ಹೆಸರು 'ಸಾಹಿತ್ಯರತ್ನ' ಒಳಗೆ ರೈಲ್ವೆ ಅಂತಸ್ತಿನ ಕಚ್ಚಾಕತೆ. ಇದೀಗ ಕನ್ನಡ ಸಾಹಿತ್ಯ. ಈ ಅಭಾವ ಕಾಲದಲ್ಲಿ ಕಾಗದದ ದುರುಪಯೋಗ ನಿಲ್ಲಬೇಕು.'

'ಇದು ಕೇವಲ ವಿಷದ ಗುಳಿಗೆ'

'ವ್ಯಕ್ತಿದ್ವೇಷವ್ಯ ಇವರಲ್ಲಿ ತಾಂಡವವಾಡುತ್ತಿರುವುದನ್ನು ನಾವು ಗುರುತಿ ಸಬಹುದು. ಸಾಹಿತ್ಯರತ್ನ ರೈಲ್ವೆ ಅಂತಸ್ತಿನ ಕಚ್ಚಾಕತೆಯಾದರೆ ಪಾನ್ವಾಲಾ ಅವರ ಮಾತೃಭೂಮಿಯಲ್ಲಿ ಬರೆಯುತ್ತಿರುವ 'ಪಾನ್-ಸುಪಾರಿ'ಯನ್ನು ಅಭಿ ಜಾತ ಸಾಹಿತ್ಯವೆಂದು ಒಪ್ಪಿಕೊಳ್ಳೋಣವೇ?'

'ಈ ಪಾನ್ವಾಲಾ ಅವರು ತಿಳಿಯುವಷ್ಟು ಓದುಗರು ಮೂರ್ಖರಲ್ಲ. ಅವರಿಗೆ ಯುಕ್ತಾಯುಕ್ತ ಜ್ಞಾನವಿದೆ.'

'ಅದೇ ನಮ್ಮ ಆಧಾರ. ಓದುಗರೆಲ್ಲಾ ಪಾನ್ವಾಲಾಗಳೇ ಆಗಿಬಿಟ್ಟರೆ ಕನ್ನಡ ಸಾಹಿತ್ಯವನ್ನೆಲ್ಲಾ ಹಿಂದೂಸಾಗರಕ್ಕೆ ಅಟ್ಟಬೇಕಾಗುತ್ತದೆ.'

'ವಿಶ್ವಭಾರತಿಯ ಸುದೀರ್ಘ ವಿಮರ್ಶೆಯನ್ನು ಯಾವ ದರ್ಜೆಗೆ ಸೇರಿ ಸುವಿರಿ?'

'ಇಂದಿನ ಕನ್ನಡ ಸಾಹಿತ್ಯವೆಂದರೆ ಭಾರತದ ಪ್ರಾಚೀನ ದೇವಾಲಯ ವಿದ್ದಂತೆ. ಯಾರುಬೇಕಾದರೂ ಬಂದು ಮೂರ್ತಿಗಳನ್ನು ಮುಕ್ಕುಮಾಡಿ, ಅಂದಗೆಡಿಸಿ ತಮಗೆ ಬೇಕಾದುದನ್ನು ಮನೆಗೆ ಒಯ್ಯಬಹುದು. ತರ್ಕಬದ್ಧ ವಾಗಿ, ವಾಕ್ಯಗಳು ಶುದ್ಧವಾಗಿ ನಾಲ್ಕುಪಂಕ್ತಿ ಬರೆಯುವುದಕ್ಕೆ ಬರದಿರುವ ಶ್ರೀ ಶ್ರೀಧರಪಂತರುವರೂ ಇಂದು ವಿಮರ್ಶಕ ಸೋಗು ಹಾಕಿಕೊಂಡು ಮೆರೆಯಲಾರಂಭಿಸಿದ್ದಾರೆ. ಇಲ್ಲಿನೋಡಿ ಇವರ ವಿಮರ್ಶೆಯಲ್ಲಿನ ಮುಕ್ತಕ ಗಳನ್ನು.

'ಸಂಭಾಷಣೆಯಲ್ಲಿ ರಸವಿರಬೇಕು. ಇಬ್ಬರು ವ್ಯಕ್ತಿಗಳು ಸೇರಿ, ಹವಾ ವನ್ನು ಕುರಿತು ಅಥವಾ ಕಾಫಿಯಲ್ಲಿ ಸಕ್ಕರೆ ಸಾಕೋ ಸಾಲದೇ ಎಂದಾಗಲಿ, ಕೂತು ಸಿಗರೇಟನ್ನು ದಬ್ಬಿಯೊಳಗಿನಿಂದ ತೆಗೆದು ತುಟಿಯಲ್ಲಿ ಸಿಕ್ಕಿಸಿ ಬೆಂಕೀ ಕಡ್ಡಿ ಗೀಚಿದನೆಂದಾಗಲೀ, ಈ ರೀತಿ ಶುಷ್ಕವಾದ ಸಂಭಾಷಣೆ ಸನ್ನಿವೇಶ ಗಳಿಂದ ಕಥೆಯಾಗಲಿ ಕಾದಂಬರಿಯಾಗಲಿ ಜೀವವತ್ತಾಗುವುದಿಲ್ಲ. ಜೀವನ ದಲ್ಲಿ ಅದರಲ್ಲಿಯೂ ಕಾದಂಬರಿಯಲ್ಲಿನ ವ್ಯಕ್ತಿಗಳ ಜೀವನದಲ್ಲಿ ಮೋಘ ವ್ಯಾಪಾರವಾಗಲಿ ಸಂಭಾಷಣೆಯಾಗಲಿ ಇರಬಾರದು.'

ಒಂದುಸಲ ಸಾಮಾನ್ಯ ವ್ಯವಹಾರ ಇರಬಾರದು ಎನ್ನುತ್ತಾರೆ. ಇನ್ನೊಂ ಮ ಸಲ ಮೋಘ (ಅಮೋಘ ಎಂದು ಕಾಣುತ್ತದೆ) ವ್ಯಾಪಾರ ಇರಬಾರದು ಎನ್ನುತ್ತಾರೆ. ಪೂರ್ವಾಪರವಿರುದ್ಧ.

'ಗ್ರಂಥಕರ್ತನು ತಾನು ಓದಿರುವ ಅಥವಾ ಜನಸಾಮಾನ್ಯದಲ್ಲಿ ನಾಗರಿ ಕತೆಯ ಕುರುಹೆನಿಸಿಕೊಂಡ ಗ್ರಂಥಗಳ ಚಿತ್ರಕಾರರ ನಾಯಕರ ಕಲಾಭಿಜ್ಞರ ಹೆಸರುಗಳನ್ನು ಹೇಗಾದರೂ ಪುಸ್ತಕದಲ್ಲಿ ಜೋಡಿಸಿ ಅದಕ್ಕಾಗಿಯೇ ಅನವಸರ ಸನ್ನಿವೇಶಗಳನ್ನುಂಟುಮಾಡುವುದು, ರಚನಾ ವೈದಗ್ಧದ ಸೂಚನೆ ಅಲ್ಲ.

ಹಾಗೆ ಮಾಡುವುದು ಕೇವಲ ವಿದ್ಯಾರ್ಥಿ ಅವಸ್ಥೆಯಲ್ಲಿ ಅಶಿಕ್ಷಿತ ಬರಹಗಾರರ ಸ್ವಭಾವ.'

ಸಾಹಿತ್ಯರತ್ನದ ಹಿನ್ನೆಲೆ ಕನ್ನಡನಾಡಿನ ಸಂಸ್ಕೃತಿಕ ಇತಿಹಾಸದ ಬೆಳವಳಿಗೆ. ಆ ಸಂದರ್ಭದಲ್ಲಿ ಕೆಲವು ಸಜೀವ ವ್ಯಕ್ತಿ, ಸಂಸ್ಥೆ, ಸನ್ನಿವೇಶಗಳನ್ನು ನಾನು ತಂದುಕೊಂಡಿದ್ದೇನೆ. ಇವುಗಳನ್ನು ಹೇಗಾದರೂ ಮಾಡಿ ನಾನು ಸೇರಿಸಿಲ್ಲ. ಕಥೆಯಲ್ಲಿ ಇವು ಹಾಸುಹೊಕ್ಕಾಗಿ ಸೇರಿಕೊಂಡಿವೆ. ವಿದ್ಯಾರ್ಥಿ ಅವಸ್ಥೆಯಲ್ಲಿನ ಯಾವ ಬರಹಗಾರ ಕಲೆಗೆ ಭಂಗತರದೆ ಈ ಕೆಲಸಮಾಡಬಲ್ಲ ಶ್ರೀ ಶ್ರೀಧರರು ತೋರಿಸಿಕೊಡಲಿ.

'ಲಲಿತೆ ತಾಯಿಗೆ ಇವರಿಬ್ಬರ (ಮೂರ್ತಿ ಮತ್ತು ಲಲಿತೆಯರ) ಅನ್ಯೋನ್ಯಾನುರಾಗ ಉತ್ಸಾಹಕರವು. ಅದರ ದೋಹದಕ್ಕೆ ಅತಿ ಸಹಾಯಭೂತಳು ಕೂಡ. ಒಂದೊಂದು ವೇಳೆ ಲಲಿತೆಯ ತಾಯಿ ಓದುಗರಿಗೆ ವೇಶ್ಯ ಮಾತೆಯ ಪಾತ್ರವಹಿದ್ದಾಳೋ ಎಂದು ತೋರುವುದು ಸಹಜ. ಒಟ್ಟಿನ ಮೇಲೆ ಲಲಿತೆಯ ಮನೋಧರ್ಮವು ಕೃಪಪಾತ್ರವಾದುದು. ಅದು ಒಂದು 'ಪ್ಯಾತಲಾಜಿಕಲ್ ಕಂಡಿಷನ್' ಹೌದು.'

ತ್ಯಾಗ, ಕರ್ಮ, ಪರಿಶುದ್ಧವಿಚಾರಗಳಿಂದ ಹಣ್ಣಾದ ಜೀವ ಲಲಿತೆಯ ತಾಯಿಯದು. ಆಕೆಯ ಪಾತ್ರವನ್ನು ಲೇಖಕರು ವೇಶ್ಯಾಮಾತೆಗೆ ಹೋಲಿಸಬೇಕಾದರೆ ಅವರ ಸಂಸ್ಕೃತಿಯ ಮಟ್ಟ ವ್ಯಕ್ತವಾಗುತ್ತದೆ. ಲೇಖಕರ ಪ್ಯಾತಲಾಜಿಕಲ್ ಕಂಡಿಷನ್‌ಗೆ ನಾವು ವಿಷಾದಪಡುವಂತಾಗುತ್ತದೆ.

'ಶಾಂತಿನಿಕೇತನ, ಅನೇಕ ಅಂತರ್ಜಾತೀಯ ಪ್ರಖ್ಯಾತ ವ್ಯಕ್ತಿಗಳ ಗ್ರಂಥಗಳ ಹೆಸರುಗಳು, ಮೂರ್ತಿಯ ಆಂಧ್ರ ಗುಜರಾತೀ ಮಿತ್ರರು ಇತ್ಯಾದಿ ಇತ್ಯಾದಿ, ಇನ್ನು ಕೆಲವು ವಿಷಯಗಳು ಅಸಂಬದ್ಧ ಪ್ರಲಾಪವೆನಿಸುವುದು.'

ಲೇಖಕರ ವಿಮರ್ಶೆಗಿಂತಲೂ ಹೆಚ್ಚಿನ ಅಸಂಬದ್ಧ ಪ್ರಲಾಪ ಹುಡುಕಿದರೂ ಮತ್ತೆಲ್ಲಿಯೂ ಸಿಗಲಿಕ್ಕಿಲ್ಲ. ಭಾರತ ಒಂದು. ಕರ್ನಾಟಕ, ಆಂಧ್ರ, ಗುಜರಾತ, ಇನ್ನಿತರ ಪ್ರಾಂತ್ಯಗಳ ಸಖ್ಯ, ವಿಚಾರವಿನಿಮಯಗಳಿಂದ ಆ ಗುರಿಯನ್ನು ಸಾಧಿಸಬಹುದು, ಸಾಧಿಸಬೇಕೆಂಬುದು ನನ್ನ ಮತ. ಅದನ್ನು ಸಾಹಿತ್ಯರತ್ನದಲ್ಲಿ ಚಿತ್ರಿಸಿದ್ದೇನೆ. ಕನ್ನಡ ಸಾಹಿತಿಯ ಜೀವನ ಕಥಾನಕದಲ್ಲಿ ಪ್ರಖ್ಯಾತ

ವ್ಯಕ್ತಿಗಳ ಗ್ರಂಥಗಳ ಹೆಸರುಗಳೂ ಗುಜರಾತಾ, ಆಂಧ್ರ, ಬಂಗಾಳೀ ಸಾಹಿತಿಗಳ ಸಂಬಂಧ ಬರುವುದು ಅಸಾಧ್ಯವೂ ಅಲ್ಲ, ಅಪ್ರಕೃತವೂ ಅಲ್ಲ. ಲೇಖಕರು ಬಹಳ ಕಷ್ಟಪಟ್ಟು ಗ್ರಂಥದಲ್ಲಿಲ್ಲದಿರುವ ದೋಷಗಳನ್ನು ದೋಷಗಳೆಂದು ಕಾಣಿಸಲೆತ್ನಿಸುತ್ತಿದ್ದಾರೆ.

ಕೊನೆಯದಾಗಿ ಈ ವಾಕ್ಯವೃಂದವನ್ನು ನೋಡಿ, ಲೇಖಕರ ವಿಮರ್ಶನಾ ನೈಪುಣ್ಯ, ಪಾಂಡಿತ್ಯಗಳಿಗೆ ಇದೊಂದೇ ವಾಕ್ಯವೃಂದ ಸಾಕು.

'ಮಾನವ ಜೀವನವು ಎಂದಿಗೂ ನಿಸರ್ಗದ ಮಡಿಲಿನಲ್ಲಿ ಹುಟ್ಟಿ, ಬೆಳೆದು ಸಮ್ಮಿಶ್ರಿತವಾಗುವುದು. ಮಾನವರ ಸುಖ ದುಃಖಗಳು, ರಾಗದ್ವೇಷಗಳು ಪ್ರಕೃತಿಯ ವೈಖರಿಯನ್ನನುಸರಿಸುವವು. ನಾವು ದುಃಖದಲ್ಲಿದ್ದರೆ ಗಿಡಮರಗಳು ದುಃಖಭರದಿಂದ ಬಾಗಿರುವವು. ಪುಷ್ಪಗಳು ಮುಕುಳಿತವಾಗುವವು. ನಮ್ಮ ಹೃದಯವು ಸುಖ ಸ್ಪರ್ಶವಾದಾಗ ಪ್ರಕೃತಿ ಪ್ರಫುಲ್ಲವದನೆಯಾಗುವಳು. ಹಕ್ಕಿಗಳು ಹಾಡಲಾರಂಭಿಸುವವು. ಸಂಧ್ಯಾರಾಗದಲ್ಲಿ ವಿದ್ಯಾಧರರು ವಿಚಿತ್ರ ತಾಂಡವ ಮಾಡುವರು. ಈ ರೀತಿ ಮನುಷ್ಯನ ಬಾಳು ಎಂದೆಂದಿಗೂ ಪ್ರಕೃತಿಯ ತೆರೆಯ ಮುಂದೆ ಆಡುವ ನಾಟಕವಲ್ಲವೇ? ಹಾಗಿರುವಲ್ಲಿ ಒಬ್ಬ ವ್ಯಕ್ತಿಯ ಜೀವನದ ಆದ್ಯಂತವನ್ನು ರಚಿಸುವಾಗ, ಎಲ್ಲೆಲ್ಲಿಯೂ ಹಿಂದಿನ ತೆರೆಯನ್ನೇ ಚಿತ್ರಿಸದೇ ಹೋದರೆ ಅದು ಎನಿತು ರಾಜಿಸುವುದು. ಹಕ್ಕಿಯ ಹಾಡಾಗಲಿ, ಒಂದು ಮಳೆಯಾಗಲಿ, ಬಿಸಿಲಾಗಲಿ, ಸಾಯಂ ಪ್ರಾಂತಸ್ಸಂಧ್ಯೆಗಳಾಗಲಿ, ಗಗನದ ನೈಲ್ಯವಾಗಲಿ ಪ್ರಸ್ತಾಪವಾಗದೆ ಈ ಸಾಹಿತ್ಯರತ್ನದ ಗ್ರಂಥವೈಪುಲ್ಯವು ಎಷ್ಟು ಕೃತಕವೋ ಓದುಗರೇ ಊಹಿಸಬೇಕು. ಇದು ಅದ್ಯಂತವು ಕೃತಕವಾದ ಕೂಟಶಾಲೆಯ (ಡ್ರಾಯಿಂಗ್ ರೂಮ್) ವಾತಾವರ್ಣದಿಂದ ತುಂಬಿದೆ. ಇದರಲ್ಲಿ ಯಾರೊಬ್ಬರು ಬೆಳಗಾಗುತ್ತಲೆ ಎದ್ದು ಪೂರ್ವದಿಶಾಕಾಂತೆಯ ಸುವರ್ಣ ವೈಭವವನ್ನು ನೋಡಿ ಚಕಿತರಾಗುವುದಿಲ್ಲ. ಹಗಲು ತಲೆಯೆತ್ತಿ ನೀಲ ಗಗನವನ್ನು ನೋಡಿ ಆನಂದಿಸುವುದಿಲ್ಲ. ರಾತ್ರಿ ತಾರಾಮಂಡಲವನ್ನೀಕ್ಷಿಸಿ ಚಕಿತರಾಗುವುದಿಲ್ಲ. ಗಿಡಮರಗಳ ಚಿಂತೆಯೇ ಯಾರಿಗೂ ಇಲ್ಲ. ಮೊದಲಿಂದ ಕೊನೆವರೆಗೂ ಜೀವನವೆಲ್ಲ ಕೃತ್ರಿಮಮಯ, ಕ್ಷುದ್ರ ವ್ಯಸನಗಳು, ಕ್ಷುದ್ರಾನಂದಗಳು. ಕಲೆಯೆಂದರೆ ಕೃತಕವೆ ಆದರೂ ಕೃತಕದಲ್ಲಿಯೂ ಸಹಜತೆ ಇದೆ.'

ಕೃತಕದಲ್ಲಿ ಕೃತಕ ಇದು ಕಲೆಯು ಬೇಕು. ಭೂಮಾನುಭವವನ್ನು ಕೊಡಬೇಕು. ಮಹತ್ತಾದ ಸುಖದುಃಖಗಳೇ ಕಲೆಗೆ ವಿಷಯ, ಇತಿವೃತ್ತ. ಜೀವನದಲ್ಲಿ ಅಲ್ಪವಾದ ಅನುಭವಗಳು ಇದ್ದೇ ಇವೆ. ಅವುಗಳ ಪ್ರತಿರೂಪವಲ್ಲ ಕಲೆ. ಜೀವನದಲ್ಲಿ ಲಭ್ಯವಾಗದ ಮಹದನುಭವವೂ ಮಹತ್ವವೂ ಕಲೆಯಲ್ಲಿ ರಚಿತವಾಗಬೇಕು. ಆಗಲ್ಲವೆ ಅದು ಜೀವನಕ್ಕೆ ಮಾರ್ಗದರ್ಶಕವಾಗುವುದು.

ಒಟ್ಟಿನ ಮೇಲೆ ಸಾಹಿತ್ಯರತ್ನ ಕನ್ನಡ ಸಾಹಿತ್ಯ ಮಂಜೂಷದಲ್ಲಿನ ಒಂದು ಕೃತಕರತ್ನವೆಂದೇ ಹೇಳಬೇಕಾಗಿದೆ. ಇದು ನಿಜವಾಗಿಯೂ ರಂಗೂನ್ ರತ್ನಗಳ ಕಾಲ ಆದ್ದರಿಂದ ಅತಿ ಶ್ರಮದಿಂದ ಕಾಲಾನುಗುಣವಾಗಿ ರಂಗೂನ್ ಕೆಮಿಕಲ್ ಡಯಮಂಡನ್ನು ತಯಾರಿಸುವುದೂ ಈ ಕಾಲದಲ್ಲಿ ಕಲೆ ಎನ್ನಿಸುವುದು.'

ಈ ವಿಮರ್ಶೆಯನ್ನು ಓದಿದರೆ ನನಗೆ ಭಗವಾನ್ ರಾಮಕೃಷ್ಣ ಪರಮಹಂಸರ ಒಂದು ಕತೆ ಜ್ಞಾಪಕಕ್ಕೆ ಬರುತ್ತದೆ.'

'ಹೇಳಿ.'

'ಒಬ್ಬ ಮೀನುಗಾತಿ ಒಂದು ದಿನ ಸಂತೆಯಲ್ಲಿ ತನ್ನ ಸರಕನ್ನು ಮಾರಿ ಮನೆಗೆ ಬರುತ್ತಿದ್ದಳಂತೆ. ದೊಡ್ಡ ಮಳೆ ಬಂತು. ಹಾದಿಯ ಪಕ್ಕದಲ್ಲಿ ಒಬ್ಬ ಹೂಗಾರನ ಪರ್ಣಕುಟಿ. ಅಲ್ಲಿ ತಂಗಿದಳು. ಮಳೆ ನಿಲ್ಲಲಿಲ್ಲ. ರಾತ್ರಿ ಅಲ್ಲಿಯೇ ಕಳೆಯಬೇಕಾಗಿ ಬಂತು. ಎಷ್ಟು ಹೊತ್ತಾದರೂ ನಿದ್ರೆ ಬರಲಿಲ್ಲ. ಪರ್ಣಕುಟಿಯಲ್ಲಿನ ಹೂಗಳ ಕಂಪು ಅವಳ ನಿದ್ರೆಯನ್ನು ಕದ್ದಿತ್ತು. ಹೆಣ್ಣುಮಗಳು ಯೋಚಿಸಿ, ತನ್ನ ಮೀನುಬುಟ್ಟಿಯ ಮೇಲೆ ನಾಲ್ಕು ಹನಿ ನೀರುದುರಿಸಿ ಮೂಗಿನ ಸೆಲೆಯ ಹತ್ತಿರ ಇಟ್ಟುಕೊಂಡು ಮಲಗಿದಳು. ಹೂವಿನ ವಾಸನೆಯ ಬದಲು ಮೀನಿನ ವಾಸನೆ ಮೂಗಿಗೆ ಬಡಿಯಲು ಆಕೆಗೆ ಸುಖವಾದ ನಿದ್ರೆ ಬಂತಂತೆ. ನಮ್ಮ ಈ ವಿಮರ್ಶಕ ಮಿತ್ರರಿಗೆ ಮೀನು ವಾಸನೆ ಕುಡಿದು ಪರಿಪಾಠ. ಒಮ್ಮೆ ಅವರ ಜೀವಮಾನದಲ್ಲಿ 'ಸಾಹಿತ್ಯರತ್ನ'ದಂತಹ ಸುಗಂಧ ಪುಷ್ಪ ದೊರೆತರೆ ನಿದ್ರೆ ಬರುವುದಿಲ್ಲ. ಮನಸ್ಸಿಗೆ ಸಮಾಧಾನವಿರುವುದಿಲ್ಲ. ಶ್ರೀಧರರು ಇನ್ನೂ ವೆಂಕಟಾಚಾರ್ಯರ ಕಾದಂಬರಿಗಳ ವಾತಾವರಣವನ್ನು ಮೀರಿಲ್ಲ. ಲಕ್ಷ್ಮೀಶನ ಜೈಮಿನಿ ಭಾರತದಲ್ಲಿ ಸೀತಾವನವಾಸವನ್ನು ಇವರು ಓದಿದ್ದಾರೆಂದು ಕಾಣುತ್ತದೆ. ಅಲ್ಲಿ ವನ್ಯ ಮೃಗಗಳು, ಪ್ರಕೃತಿ ಸೀತೆಯ ಸೇವೆಮಾಡಿದಂತೆ, ಆಕೆಯ ದುಃಖದಲ್ಲಿ

ಮೇಳವಿಸಿದಂತೆ ಪ್ರತಿಯೊಂದು ಕೃತಿಯಲ್ಲಿಯೂ ಬರಬೇಕೆಂದು ಬಯಸುತ್ತಾರೆ. ನಾನು 'ಸಾಹಿತ್ಯರತ್ನ'ದಲ್ಲಿ ನಿರ್ಮಿಸಿರುವುದು ಲಕ್ಷ್ಮೀಶನ ಕೃತಕ ಸಾಮ್ರಾಜ್ಯ ವನ್ನಲ್ಲ, ವೆಂಕಟಾಚಾರ್ಯರ ತಲೆಭಾರದ ಪ್ರಕೃತಿ ವೈಭವವನ್ನಲ್ಲ. ಮಾನ ವನ ನಿಜವಾದ—ಸಹಜವಾದ—ದಾರುಣವಾದ ವೇದನೆಯನ್ನು, ಸಂವೇದನೆ ಯನ್ನು. ಅವನ ಆಸೆ-ನಿರಾಸೆಗಳನ್ನು—ಅವನ ಸೋಲು-ಗೆಲುವುಗಳನ್ನು— ಅವನ ರಾಗದ್ವೇಷಗಳನ್ನು. ನಾನು ನೋಡುವುದು ಸತ್ತ ಗಿಡಮರಗಳನ್ನಲ್ಲ ಉಸಿರೆತ್ತದ ಕಲ್ಲುಬಂಡೆಗಳನ್ನಲ್ಲ,—ಸಜೀವ ಮಾನವ ವೃಕ್ಷಗಳನ್ನು, ಜೀವನದ ಅಲೆ ಬಂದು ಅಪ್ಪಳಿಸುವ ಅವರ ಹೃದಯ ಬಂಡೆಗಳನ್ನು. ಕೋಗಿಲೆಯ ಗಾನ, ವಸಂತನ ವೈಭವ, ಮಂದಮಾರುತನ ವಿಲಾಸ ಇಂದು ಯಾರ ಜೀವನ ದಲ್ಲಿ ಉಳಿದಿದೆ, ಕೆಲವು ವಿಲಾಸಿಗಳಾದ ಕವಿಗಳನ್ನು ಬಿಟ್ಟು. ಕವಿಯ ಕೃತಕ ಸ್ವಪ್ನಜೀವನ ಮುದ್ರಿತ ಬಾಳನ್ನಲ್ಲಾ ನಾನು ಅನುಲಕ್ಷಿಸುತ್ತಿರುವುದು. ನಮ್ಮ ನಿತ್ಯ ಬಾಳು ಅದರ ಗೋಳು, ಗೆಲುವುಗಳನ್ನು. ಇದನ್ನು ಅರ್ಥಮಾಡಿಕೊಳ್ಳದೆ ಶ್ರೀಧರರು ಲೇಖನಿ ಹಿಡಿಯುವುದೆಂದರೆ 'ದೇವತೆಗಳು ಕಾಲಿಡಲು ಅಂಜುವೆಡೆ ಯಲ್ಲಿ ದಡ್ಡರು ಧಾವಿಸುತ್ತಾರೆ' ಎಂಬ ಇಂಗ್ಲಿಷ್ ಗಾದೆಯ ಅನುಕರಣವಲ್ಲದೆ ಮತ್ತೇನು?'

'ಈಯೆಲ್ಲ ಕಟುಟೀಕೆಗಳಿಂದ ನೀವು ಮನಃಕಷಾಯ ಮಾಡಿಕೊಳ್ಳ ಬಾರದು. ಇವುಗಳ ಪರಿಣಾಮ ನಿಮ್ಮ ಮುಂದಿನ ಕೆಲಸದ ಮೇಲಾಗಬಾರದು.'

'ಇದನ್ನು ನಾನು ಬಲ್ಲೆ. ನಾಲ್ಕು ಕಟುಟೀಕೆಗಳಿಂದ ನೊಂದು ಕೂಡು ವವನು ಸಾಹಿತ್ಯರಂಗಕ್ಕೆ ಇಳಿಯಬಾರದು. ನಾಲ್ಕು ಜನ ಸಾಕಷ್ಟು ವಿವೇಚನೆ ಯಿಲ್ಲದೆ 'ಸಾಹಿತ್ಯರತ್ನ'ವನ್ನು ತೆಗಳಿದರೆ ನಾಲ್ಕಾರು ಜನ ಅದನ್ನು ಮಾನಿ ಸಿಯೂ ಇದ್ದಾರೆ. ಗ್ರಂಥವನ್ನು ಓದಿರುವವರು ಈ ನಾಲ್ವರೇ ಅಲ್ಲ, ಸಾವಿರಾರು ಜನ ಓದಿದ್ದಾರೆ. ಅವರಲ್ಲಿ ಹಲವರು ತಮ್ಮ ಅಭಿಪ್ರಾಯಗಳನ್ನು ಸೂಚಿಸಿ ಪತ್ರ ಬರೆದಿದ್ದಾರೆ. ಬಹುಸಂಖ್ಯಾತ ಓದುಗರಿಗೆ 'ಸಾಹಿತ್ಯರತ್ನ' ಪ್ರಿಯವಾ ಗಿದೆಯೆಂದು ನಿಸ್ಸಂದೇಹವಾಗಿ ಹೇಳಬಲ್ಲೆ. ನಾನು ಹೊಸ ವಿಚಾರವನ್ನು ಉದ್ರೇಕಿಸುವ ಶ್ರೇಷ್ಠ ಕಾದಂಬರಿಯನ್ನು ಬರೆದು ಕನ್ನಡ ಜನತೆಗೆ ಕೊಟ್ಟಿರು ವೆನೆಂಬ ಆತ್ಮವಿಶ್ವಾಸ ನನಗಿದೆ. ಬೇಕಾದವರು ಬೇಕಾದ ರೀತಿಯಲ್ಲಿ ಅದನ್ನು

ಅಡ್ಡಗಟ್ಟೆಲಿಕ್ಕಿ ಸಿದ್ಧರೂ ಮಹಾಪ್ರವಾಹದಂತೆ ಅದು ಸಾಗುತ್ತದೆಯೆಂಬುದನ್ನು ಬಲ್ಲೆ.'

'ಒಳ್ಳೆಯ ವಿಮರ್ಶೆಗಳೂ ಬಂದಿವೆ ಎಂದಿರಲ್ಲಾ, ಅವು ನಿಮ್ಮಲ್ಲಿವೆಯೇ?'

'ಇಲ್ಲಿ ನೋಡಿ' 'ಕರ್ನಾಟಕ ವೈಭವ'ದಲ್ಲಿ ಶ್ರೀ ಕೆ.ಕೆ. ಕುಲಕರ್ಣಿಯವರು ನನ್ನ ಪರವಾಗಿ ಎಂತಹ ವಾದ ಮಾಡಿದ್ದಾರೆ.'

ಕೈಗೆ ಕರ್ನಾಟಕದ ವೈಭವವನ್ನು ತೆಗೆದುಕೊಂಡು ಓದಿದೆ.

'ಶ್ರೀಮಾನ್ ಅ. ನ. ಕೃಷ್ಣರಾಯರು ಬರೆದ 'ಸಾಹಿತ್ಯರತ್ನ'ವೆಂಬ ಸಾಮಾಜಿಕ ಕಾದಂಬರಿಯು ಧಾರವಾಡದ 'ಲಲಿತ ಸಾಹಿತ್ಯ ಮಾಲೆ'ಯಿಂದ ಹೊರಬಿದ್ದಿದೆ. ಲೇಖಕರು ಈ ಮೊದಲೇ ಅನೇಕ ಕಾದಂಬರಿಗಳನ್ನು ಬರೆದು ಕನ್ನಡ ಸಾಹಿತ್ಯದಲ್ಲಿ ತಮ್ಮದೇ ಆದ ಸ್ವತಂತ್ರ ಶೈಲಿಯನ್ನೂ ಸ್ವತಂತ್ರವಾದ ವಿಚಾರ ಪ್ರಚೋದನಾಕಾರ್ಯವನ್ನೂ ನಿರ್ಮಿಸಿಕೊಂಡಿದ್ದಾರೆ; ಹೆಸರು ಪಡೆದಿದ್ದಾರೆ.

ಈ 'ಸಾಹಿತ್ಯರತ್ನ' ಕಾದಂಬರಿಯಲ್ಲಿ ಒಬ್ಬ ಸಾಧಕನ ಜೀವನವನ್ನು ಚಿತ್ರಿಸಿದುದಾಗಿದೆ. ಕೇಶವ ಮೂರ್ತಿ ಒಬ್ಬ ಸಾಹಿತಿ. ಅವನಿಗೆ ಚಿಕ್ಕಂದಿನಲ್ಲಿ ಶಾಲೆಯ ಕಡೆಗೆ ಲಕ್ಷ್ಯವಿರಲಿಲ್ಲ, ತಾನು ಪ್ರೀತಿಸುತ್ತಿದ್ದ ಹಳ್ಳಿಯ ಕವನಗಳನ್ನು ಮಾವಿನ ತೋಪೊಂದರಲ್ಲಿ ಪಠಿಸುತ್ತ ಕುಳಿತು ಬಿಡುತ್ತಿದ್ದನು, ಶಾಲೆಯೆಂದರೆ ವಿದ್ಯಾಮಂದಿರವಲ್ಲ ! ಕಾರಾಗಾರ. ಹಕ್ಕಿಯಂತೆ ಹಾರಾಡುವ ಮನಸ್ಸನ್ನು ಕಟ್ಟಿ ಹಾಕುವ ಪಂಜರ' ಎಂದು ಅವನ ಭಾವನೆ. ಶಾಲೆಯ ಕೊನೆಯ ಪರೀಕ್ಷೆಗೂ ಕೂಡಲಿಲ್ಲ. ಅವನ ಗೆಳೆಯ ಗುಂಡೂ ಒಬ್ಬ ಭಾವಜೀವಿ. ಅವನ ಸಂಗವು ಅವನಿಗೆ ಉತ್ತೇಜಿತವಾಗಿರುತ್ತದೆ. ಅವನಿಂದಲೇ ವಿವೇಕಾನಂದರ ಸಂದೇಶವು ಮೂರ್ತಿಯಲ್ಲಿ ಅಜ್ಞಾತ ಶಕ್ತಿದಂತಾಗುವದು. ಮೂರ್ತಿಯು ಮುಂದೆ ಶಾಂತಿನಿಕೇತನಕ್ಕೆ ಹೋಗಿ ಅಲ್ಲಿ ಗುರು ರವೀಂದ್ರರಲ್ಲಿ ತನ್ನ ಅಭ್ಯಾಸವನ್ನು ಸಾಗಿಸುವನು. ಅಲ್ಲಿಯೇ ಅವನಿಗೆ ತನ್ನ ಜೀವನದ ಅಗಾಧತೆಯು ಗೋಚರವಾಗುವದು. ಅಲ್ಲಿ ಕನ್ನಡದ ಕೀರ್ತಿಯನ್ನು ಬೆಳಗಿಸಿದಾಗ ತನ್ನ ಜೀವನವನ್ನೇ ಕನ್ನಡ ಸಾಹಿತ್ಯಕ್ಕಾಗಿ ಮೀಸಲಿಡಲು ನಿರ್ಧರಿಸುವನು. ಅಲ್ಲಿಂದ ಮರಳಿದ ಬಳಿಕ ಪುನಃ ಶಾಂತಿ

ನಿಕೇತನಕ್ಕೆ ಅವನ ತಂದೆ ವೆಂಕಟರಾಯರು ಅವನನ್ನು ಕಳಿಸಲಿಚ್ಛಿಸುವದಿಲ್ಲ. ಅವನು ಬೆಳಗಾವಿಯಲ್ಲಿ ಜರುಗಿದ ಕನ್ನಡ ಸಾಹಿತ್ಯ ಸಮ್ಮೇಲನದಿಂದ ಉತ್ತೇಜಿತನಾಗಿ ಕನ್ನಡ ಗ್ರಂಥಗಳನ್ನು ಬರೆಯತೊಡಗುವನು. ಅಷ್ಟರಲ್ಲಿ ಅಸಿಸ್ಟಂಟ ಕಮಿಶನರರಾಗಿದ್ದ ನಾರಾಯಣರಾಯರು ತಮ್ಮ ಮಗಳಾದ ಗಿರಿಜಾಳನ್ನು ಮೂರ್ತಿಗೆ ಕೊಟ್ಟು ಮದುವೆ ಮಾಡುವರು. ಆದರೆ ಗಿರಿಜೆಯು ಮೂರ್ತಿಯ ಜೀವನದ ಯೋಗ್ಯತೆಯನ್ನು ಕಂಡು ಹಿಡಿಯುವಷ್ಟು ಚತುರೆಯಾಗಿರುವದಿಲ್ಲ. ಆ ತರದ ಒಲವೂ ಅವಳಲ್ಲಿರುವದಿಲ್ಲ. ಪ್ರಸ್ತದ ದಿನ ಮೂರ್ತಿ 'ನನ್ನ ಮನಸ್ಸು ನನ್ನ ಬರವಣಿಗೆ ಮೇಲಿದೆ. ಅದು ಯಾರಿಗೆ ಪ್ರಿಯವೋ ಅವರು ನನಗೆ ಪ್ರಿಯರು' ಎಂದಾಗ ಗಿರಿಜಾ- 'ನಿಮ್ಮ ಬರವಣಿಗೆಗೆ ಬೆಂಕಿ ಹಾಕಿ' ಎನ್ನುವಳು. ಆ ಕ್ಷಣದಲ್ಲಿಯೇ ಮೂರ್ತಿಯು ಮನೆಬಿಟ್ಟು ಹೊರಡುವನು. ಅಂದಿನಿಂದ ಗಂಡಹೆಂಡಿರು ಸಮರಸರಾಗಲು ಸಾಧ್ಯವಾಗುವದಿಲ್ಲ. ಆದರೆ ಕರ್ನಾಟಕ ಸ್ತ್ರೀಸದನದ ಅಧ್ಯಾಪಿಕೆಯರಲ್ಲಿ ಒಬ್ಬಳಾದ ಲಲಿತಮ್ಮನೆಂಬ ಬಾಲ ವಿಧವೆಯು ಮೂರ್ತಿಯ ಯೋಗ್ಯತೆಯನ್ನು ಕಂಡುಹಿಡಿದವಳಾಗಿರುತ್ತಾಳೆ. ಅವಳು ತನ್ನ ವಿದ್ಯಾರ್ಥಿನಿಯರಿಂದ ಮೂರ್ತಿಯು 'ಆಸೆಯ ಶತಮಾನ' ವೆಂಬ ನಾಟಕವನ್ನು ಮಾಡಿಸಿದ ಪ್ರಸಂಗದಲ್ಲಿ ಅವಳೇ ತನ್ನ ಬಾಳಿನ ನೌಕೆಯು ಒಡೆದು ಚೂರುಚೂರಾಗದಂತೆ ರಕ್ಷಿಸಲು ಬಂದಿರುವ ದೇವತೆಯೆಂದು ಅವನಿಗೆ ಭಾವನೆಯು ನಿಜವಾಗಿತ್ತು. ಏಕೆಂದರೆ ಲಲಿತಮ್ಮನಿಗೆ ಮೂರ್ತಿಯು ಅತ್ಯಂತ ಪ್ರಿಯನಾದ ವ್ಯಕ್ತಿಯಾಗಿದ್ದನು. ಅವಳ ಬಾಳನ್ನು ತಿದ್ದಿದ ಶಿಲ್ಪಿಯಾಗಿದ್ದನು. ಅವಳು ಅವನ ಎಲ್ಲ ಗ್ರಂಥಗಳನ್ನು ಓದಿ ಅವನನ್ನು ಬಲ್ಲವಳಾಗಿದ್ದಳು. ಅವಳೊಡನೆ ಮೂರ್ತಿಯ ಸಹವಾಸವು ಬೆಳೆದಂತೆ ಅದನ್ನರಿತ ಅವನ ಮನೆಯವರೂ ಅವನ ಹೆಂಡತಿಯೂ ಅವನನ್ನು ಹೀಯಾಳಿಸಹತ್ತುವರು. ಅವರಿಂದ ಲಲಿತಮ್ಮನು ಮೂರ್ತಿಯ ಸೂಳೆಯೆಂದು ಎಣಿಸಲ್ಪಡುವಳು. ಅವನಿಗೆ ತನ್ನ ಮನೆಯು ಸಾಕಾಗಿಹೋಗುವದು. ಬೇಜಾರದಿಂದ ಮುಂಬಯಿಗೆ ಹೋಗಿ ಅಲ್ಲಿ ಸಮಾಜ ಸತ್ತಾವಾದಿಗಳ ಗುಂಪಿಗೆ ಸೇರಿ ನರೇಂದ್ರ ಪ್ರಸಾದನೆಂಬ ಹೆಸರಿನಿಂದ ನ್ಯೂ ಸೆಂಚುರಿ ಎಂಬ ಪತ್ರಿಕೆಯಲ್ಲಿ ಕೆಲಸಮಾಡುವನು. ಆಗ ಕೂಲಿಕಾರರ ಸಮಸ್ಯೆಯೇ ಅವನ ಗುರಿಯಾಗುವದು. ಲಲಿತಮ್ಮನು

ಮೂರ್ತಿಯ ವಿರಹದಿಂದ ಬಳಲಿ ತನ್ನ ಚಿತ್ತಸ್ವಾಸ್ಥ್ಯಕ್ಕೆ ಅವನ ಕತೆಗಳನ್ನು ಇಂಗ್ಲಿಷಿನಲ್ಲಿ ಅನುವಾದಮಾಡಿ ಮುಂಬಯಿ ಕ್ಲಾಸಿಕಲ್ ಪತ್ರಿಕೆಯಲ್ಲಿ ಪ್ರಕಟಿಸುತ್ತ ಹೋಗುವಳು. ಆಗ ಮೂರ್ತಿಗೆ ನ್ಯೂಸೆಂಚುರಿಯ ಸಂಪಾದಕತ್ವವನ್ನು ವಹಿಸಿದ್ದುದರ ಮೂಲಕ ಜೈಲು ಶಿಕ್ಷೆಯಾಗುವದು. ಅವನು ಜೈಲಿನಿಂದ ಬಿಡುಗಡೆಯಾಗಿ ಬಂದ ಬಳಿಕ ಅವನ ಮತ್ತು ಲಲಿತಮ್ಮನ ಮಿಲನವಾಗುವದು. ಅವರ ವಿವಾಹವೂ ಜರಗುವದು. ಗಿರಿಜಾಳು ತಮ್ಮೊಡನೆ ಇರಬೇಕೆಂದು ಅವಳ ಆಶೆ. ಆದರೆ ಗಿರಿಜಾಳು ತನ್ನ ಶ್ರೀಮಂತ ತಂದೆಯ ಮನೆಯಲ್ಲಿ ಯಾವುದಕ್ಕೂ ಕಡಿಮೆ ಇಲ್ಲವೆಂದು ಭಾವಿಸಿ ಅವರ ಜೊತೆಯುಲ್ಲಿರಲು ಇಚ್ಛಿಸುವದಿಲ್ಲ. ಏಕೆಂದರೆ ಅವಳ ಅಭಿಪ್ರಾಯದಲ್ಲಿ ಮೂರ್ತಿ ಹಾಗು ಲಲಿತಮ್ಮ ಇವರಿಬ್ಬರೂ ತುಚ್ಛರಾಗಿದ್ದರು. ಮೂರ್ತಿ ಹಾಗು ಲಲಿತಮ್ಮ ಇವರಿಬ್ಬರೂ ತಮ್ಮ ಜೀವನದ ಸಾಧನದ ಸಫಲತೆಗೆ ಒಂದಾಗುತ್ತಾರೆ. ಈ ಕಥಾವಸ್ತುವನ್ನು ಅಳವಡಿಸಿಕೊಂಡು ಲೇಖಕರು ಸುದೀರ್ಘವಾದ ಸಾಹಿತ್ಯ ರತ್ನವನ್ನು ತಮ್ಮ ಸಹಜ ಮತ್ತು ನಿರರ್ಗಳವಾದ ಶೈಲಿಯಲ್ಲಿ ಬರೆದು ಓದುಗರನ್ನು ಗ್ರಂಥ ಮುಗಿಯುವವರೆಗೂ ಉತ್ತೇಜಿತರನ್ನಾಗಿ ಮಾಡಬಲ್ಲವರಾಗಿದ್ದಾರೆ. ವಿಮರ್ಶಕರನೇಕರು ತಮ್ಮ ಪರಂಪರಾಗತವಾದ ಸನಾತನ ದೃಷ್ಟಿಯನ್ನು ಈ ಗ್ರಂಥದ ಮೇಲೆ ಚಲ್ಲಿ ತಮ್ಮ ಜಿಹ್ವಾ ಚಾಪಲ್ಯವನ್ನು ತೋರಿಸಬಹುದು. ಇದರಲ್ಲಿಯ ಕಥಾನಾಯಕನು ದುರ್ಬಲ ವ್ಯಕ್ತಿಯುಂತಿದ್ದಾನೆ. ಅವನು ಸಾಹಿತ್ಯ ಕೃತಿಗಳೊಡನೆ ಅವನ ವ್ಯಕ್ತಿತ್ವವನ್ನು ತೋರ್ಪಡಿಸದೆ ಮತ್ತು ಅಪರಾಧವಿಲ್ಲದ ಹೆಂಡತಿಯಿಂದ ಅಗಲಿಸಿ ಯಾವಳೋ ಒಬ್ಬ ಬಾಲವಿಧವೆಯನ್ನು ಅವನಿಗೆ ಗಂಟುಹಾಕುವ ಉದ್ದಿಮೆಯನ್ನು ಲೇಖಕರು ಏತಕ್ಕಾಗಿ ಮಾಡಿದ್ದಾರೋ ಎಂದು ಹಳಹಳಿಸಲೂಬಹುದು. ಇಂತಹ ವಿಮರ್ಶಕರಿಗೆ ಹೇಳಿಕೆಯೊಂದೆ! ಅದೆಂದರೆ ಕಥಾವಸ್ತು ಇಟ್ಟುಕೊಳ್ಳುವ ಕೆಲಸವು ಗ್ರಂಥಕಾರನೊಬ್ಬನದೇ ಆಗಿದೆ. ಮತ್ತು ಅದಕ್ಕೆ ಅನುಗುಣವಾಗಿ ಸನ್ನಿವೇಶಗಳ ಬೆಳವಣಿಗೆಯನ್ನು ತನ್ನ ಉದ್ದೇಶ ಸಾಧನೆಯ ಸಫಲತೆಯುಂಟಾಗುವಂತೆ ಮಾಡುವದೂ ಅವನ ಕೆಲಸ. ಮುಖ್ಯವಾಗಿ 'ಸಾಹಿತ್ಯರತ್ನ'ವೆಂದು ಗ್ರಂಥಕ್ಕೆ ಹೆಸರಿಟ್ಟ ಮಾತ್ರಕ್ಕೆ ಲೇಖಕರು ಅವನು ಬರೆದ ಗ್ರಂಥಗಳ ಹಾಗು ಅವನ ವಿಚಾರಗಳ ಪೂರ್ಣ ವಿವರವನ್ನೇ ಕೊಡ

ಬೇಕೆಂದು ನುಡಿಯುವದು ಯಾವ ನ್ಯಾಯ? ಅವನ ಕೃತಿಯ ವಿವರಗಳಿಗಿಂತಲೂ ಮೂರ್ತಿಯ ಜೀವನವು ಯಾವ ರೀತಿಯ ಹೋರಾಟದಿಂದ ಕೂಡಿತ್ತೆಂಬುದೇ ಈ ಗ್ರಂಥದ ಉದ್ದೇಶವಾಗಿದೆ.

ಈ ಗ್ರಂಥವನ್ನು ಓದುವಾಗ ನಮಗೆ Andre Maurois ನ Ariel ಗ್ರಂಥದ ಮೊದಲನೆಯ ಭಾಗದ ನೆನಪಾಗದೆ ಇರದು, ಅದು ಶೆಲ್ಲಿ ಕವಿಯ ಜೀವನ ಕಥಾವಸ್ತುವುಳ್ಳ ಗ್ರಂಥವು. ಅದರಲ್ಲಿ ನಮಗೆ ಶೆಲ್ಲಿಯಾದರೂ ಸಾಧಕನಂತೆ ಕಂಡು ಬರುತ್ತಾನೆ. ಅವನಾದರೂ ತನ್ನ ವಿದ್ಯಾಭ್ಯಾಸವನ್ನು ಹಳಿದು ನಾಸ್ತಿಕವಾದವನ್ನು ಶ್ಲಾಘಿಸಿ ಆಕ್ಸಫರ್ಡ ಯುನಿವ್ಹರ್ಸಿಟಿಯಿಂದ ತ್ಯಜಿಸಲ್ಪಟ್ಟವನು. ಕೊನೆಯವರೆಗೆ ಅವನು ಜೀವನದೊಡನೆ ಹೋರಾಟ ನಡೆಸಿದ್ದಾನೆ. ಅವನ ತಂದೆಯು ಅವನನ್ನು ತಿರಸ್ಕರಿಸುತ್ತಾನೆ. ಅವನ ಮೊದಲಿನ ಹೆಂಡತಿ Harriet ಳು ಅವನ ಯೋಗ್ಯತೆಯನ್ನರಿಯದವಳು. ಅವನನ್ನು ತಿರಸ್ಕರಿಸಿ ಅವನ ಜೀವನವನ್ನು ವಿರಸಗೊಳಿಸತೊಡಗುವಳು. ಆದರೆ ಸುಂದರಿಯೂ ಚತುರೆಯೂ ಮತ್ತು ಕಂಡು ಹಿಡಿದವಳೂ ಆದ Marry Godwin ಳನ್ನು ನೋಡಿದಾಗ 'Mary saw at once how much she interested him. Although he had made made no complaint of life he never did-she realized he was unhappy,' ಈ ರೀತಿಯಾಗಿ ಅವಳು ಶೆಲ್ಲಿಯ ಹೃದಯದಲ್ಲಿಯೇ ಒಂದಾಗಿ ನೋಡುವವಳಾಗಿರುತ್ತಾಳೆ. ಮತ್ತು ಅವಳು ಶೆಲ್ಲಿಗೆ "Second incarnation of the Goddess,' ಳಂತೆ ಕಂಡು ಬರುತ್ತಾಳೆ. ಕಾರಣ Harriet ಳನ್ನು ಅವನು ತ್ಯಜಿಸಬೇಕಾಗುತ್ತದೆ. ಇದೇ ರೀತಿಯಾಗಿ ಮೂರ್ತಿ-ಗಿರಿಜಾ-ಲಲಿತಮ್ಮ ಇವರ ಸಂಬಂಧವು ಸಾಹಿತ್ಯರತ್ನದಲ್ಲಿ ಕಂಡು ಬಂದಂತಾಗಿದೆ. ಮೂರ್ತಿಗೆ ಗೆಳೆಯನಾಗಿ ಸಹಾಯಕನಾಗಿ ಬಂದ ಗುಂಡೂಸಂತೆ ಶೆಲ್ಲಿಗೆ Thomas Jefferson Hogg ನು ನೆರಳಿನಂತೆ ಇರುತ್ತಾನೆ. Ariel ದಲ್ಲಿ ಶೆಲ್ಲಿಯ ಜೀವನವಿದ್ದರೂ ಅವನ ಕೃತಿ ಮತ್ತು ಅವನ ಕೃತಿಯ ದೆಶೆಯಿಂದ ಸಾಹಿತ್ಯದಲ್ಲಿ ಅವನಿಗಿದ್ದ ಸ್ಥಾನ ಇವುಗಳು ಎಲ್ಲಿಯೂ ಅದರಲ್ಲಿ ವಿವರಣೆ ಮಾಡಲ್ಪಟ್ಟಿಲ್ಲ. ಆ ಗ್ರಂಥಕ್ಕೂ ಸಾಹಿತ್ಯರತ್ನಕ್ಕೂ ಯಾವ ಸಂಬಂಧವಿರದಿದ್ದರೂ ಶೆಲ್ಲಿಯು ತನ್ನ ಜೀವನದೊಡನೆ

ನಡಿಸಿದ ಹೋರಾಟದಂತೆ ಪೂರ್ತಿಯಾದರೂ ತನ್ನ ಜೀವನದೊಡನೆ ಹೋರಾಟ ನಡಿಸಿದಂತಿದೆ.

ಸಾಹಿತ್ಯರತ್ನವು ನಮ್ಮ ಕನ್ನಡ ಕಾದಂಬರಿಯ ಕ್ಷೇತ್ರದಲ್ಲಿಯೇ ಕ್ರಾಂತಿ ಕಾರಿ ಗ್ರಂಥವಾಗಿದೆ. ಪರಭಾಷೆಗಳಲ್ಲಿ ಎಂತಹ ವಿಚಾರ ಪ್ರಚೋದನೆಯ ಕ್ರಾಂತಿಕಾರಿ ಗ್ರಂಥಗಳು ಹುಟ್ಟಿದ್ದರೂ ನಮ್ಮ ಕನ್ನಡ ನಾಡಿನಲ್ಲಿ ಇನ್ನೂ ಮಡಿ ಉಟ್ಟುಕೊಂಡು ಧಾಬಳಿ ಹಚ್ಚಿಕೊಂಡು ಅಂಥ ವಿಚಾರಪರಂಪರಾಗತವಾದ ಕಾದಂಬರಿಗಳನ್ನೇ ಶ್ಲಾಘಿಸುವ ವಿಮರ್ಶಕರು ಅನೇಕ ಜನರಿದ್ದಾರೆ. ಅವರು ಇನ್ನು ಮೇಲಾದರೂ ತಮ್ಮ ಅಭಿಪ್ರಾಯಗಳನ್ನು ಬದಲಾಯಿಸಬೇಕು. ನಮ್ಮ ಸಾಹಿತ್ಯವು ದಿನದಿನವೂ ನವನವೀನವಾಗುವಂತೆ ಅವರು ಲೇಖಕರಿಗೆ ಸಹಾಯ ಕಾರಿಗಳಾಗಬೇಕು. ನಮ್ಮ ಲೇಖಕರಾದರೂ ತಮ್ಮದೇ ಆದ ಹೊಸಶೈಲಿ ಹಾಗು ವಿಚಾರಗಳನ್ನು ನಮ್ಮ ಸಾಹಿತ್ಯದಲ್ಲಿ ತರಲು ಪ್ರಯತ್ನಿಸಬೇಕು. ನಮ್ಮ ಸಾಹಿತ್ಯವು ಸಂಕುಚಿತವಾಗಿರದೆ ದಿನದಿನವೂ ವಿಶಾಲವಾಗುತ್ತ ಹೋಗಬೇಕು. ಶ್ರೀಮಾನ್ ಅ. ನ, ಕೃಷ್ಣರಾಯರು ಇಂತಹ ಸಾಹಿತ್ಯರತ್ನವನ್ನೇ ನಮಗಿತ್ತುದಕ್ಕಾಗಿ ನಾವು ವಿಶೇಷವಾಗಿ ಕನ್ನಡ ತರುಣರು ಅವರನ್ನು ಶ್ಲಾಘಿಸುತ್ತೇವೆ. ಹಾಗು ಅವರ ಈ ಕೃತಿಯನ್ನು ಸ್ವಾಗತಿಸುತ್ತೇವೆ.'

'ಕನ್ನಡ ಗ್ರಂಥಗಳನ್ನು ನಿರ್ಮತ್ಸರತೆಯಿಂದ ವಿಮರ್ಶೆ ಮಾಡುವ ಕೆಲವರಾದರೂ ಇದ್ದಾರಲ್ಲಾ ಅದೇ ಸಂತೋಷ.'

'ಗ್ರಂಥಗಳನ್ನು ಅವುಗಳ ಬೆಲೆಯರಿತು ವಿಮರ್ಶೆ ಮಾಡದಿರುವುದೇ ಒಂದು ತಪ್ಪು. ಜತೆಗೆ ಎಲ್ಲಿಯದೋ ದ್ವೇಷವನ್ನು ತಂದು ವಿಮರ್ಶನದಲ್ಲಿ ಹೂಡುವುದೆಂದರೆ ಮಹಾಪರಾಧ. ಪಾನ್ವಾಲಾ ಅವರ ಟೀಕೆ ಇಂತಹ ಒಂದು ಪ್ರಕರಣವಾಗಿದೆ. ಅಷ್ಟು ನೀತಿ, ಶೀಲವಿಲ್ಲದಿದ್ದರೆ ನಮ್ಮ ಸಾಹಿತ್ಯ ಸರ್ವತೋಮುಖವಾಗಿ ಬೆಳೆಯುವುದು ಹೇಗೆ? ಇವುಗಳಿಂದ ಕ್ಷುಬ್ಧನಾಗಿ ನಾಳೆ ಶ್ರೀ ಕಾರಂತರು ಒಂದು ಪುಸ್ತಕ ಬರೆದರೆ ಅದರ ಮೇಲೆ ನನ್ನ ಸೇಡು ತೀರಿಸಿಕೊಳ್ಳುತ್ತೇನೆಂದು ಭಾವಿಸಬೇಡಿ. ವ್ಯಕ್ತಿವ್ಯಕ್ತಿಗಳು ಹೋರಾಡಬಹುದು. ಆದರದು ಅಲ್ಲಿಯೇ ನಿಂತರೆ ಚೆನ್ನು, ಅದರ ಪರಿಣಾಮ ಅವರ ಕೃತಿಗಳ ಮೇಲೂ ಹಬ್ಬಿದರೆ ಅದು ಅಧಃಪತನದ ದ್ಯೋತಕ.'

'ನಾನು ಬಹಳ ಹೊತ್ತು ನಿಮ್ಮ ಅಮೂಲ್ಯ ವೇಳೆಯನ್ನು ತೆಗೆದು ಕೊಂಡೆ. ಇನ್ನು ಅಪ್ಪಣೆಯಾದರೆ ಬರುತ್ತೇನೆ.'

'ಸಂತೋಷ.'

ಎಂದು ಎದ್ದರು. ನಾನು ಹೊರಟು ಬಂದೆ.

——::——

# ಅ. ನ. ಕೃಷ್ಣರಾಯರ ಗ್ರಂಥಗಳು

---

## ಕಾದಂಬರಿ
- ಜೀವನ ಯಾತ್ರೆ
- ಉದಯರಾಗ
- ಸಂಧ್ಯಾರಾಗ
- ಮಂಗಳ ಸೂತ್ರ
- ಸಾಹಿತ್ಯರತ್ನ
- ನಟಸಾರ್ವಭೌಮ
- ತಾಯಿಯ ಕರುಳು

## ಕಥೆ
- ಮಿಂಚು
- ಕಿಡಿ
- ಜಾತಿಹೀನನ ಮನೆಯ ಜ್ಯೋತಿ
- ಕಾಮನ ಸೋಲು
- ಪಾಪ ಪುಣ್ಯ

## ಜೀವನ ಚರಿತ್ರೆ
- ಸ್ವಾಮಿ ವಿವೇಕಾನಂದ
- ಬಸವಣ್ಣನವರ ಅಮೃತವಾಣಿ

## ಪ್ರಬಂಧ
- ವೀರಶೈವ ಸಾಹಿತ್ಯ ಮತ್ತು ಸಂಸ್ಕೃತಿ
- ಹೊಸ ಹುಟ್ಟು
- ರಾಜಾ ರವಿವರ್ಮ
- ಸಾಹಿತ್ಯ ಮತ್ತು ಜೀವನ

## ನಾಟಕ
- ಆಹುತಿ
- ಅದದ್ದೇನು
- ಗೋಮುಖವ್ಯಾಘ್ರ
- ಬಣ್ಣದ ಬೀಸಣಿಗೆ
- ಎರಡು ನಾಟಕಗಳು
- ಮದುವೆಯೋ ಮನೆಹಾಳೋ

## ಸಂಕಲನ
- ಪ್ರಣಯ ಗೀತೆಗಳು
- ಕಾಮನ ಬಿಲ್ಲು
- ಪ್ರಗತಿಶೀಲ ಸಾಹಿತ್ಯ

## ಇತರ
- ನನ್ನನ್ನು ನಾನೇ ಕಂಡೆ.

## ಸಂಪಾದಿತ
- ಭಗವದ್ಗೀತಾರ್ಥಸಾರ
- ಮರುಳುಸಿದ್ಧ ಕಾವ್ಯ

---

# ನಮ್ಮ ಪ್ರಕಟಣೆಗಳು

| | | | |
|---|---|---|---|
| ೧. ಬಸವಣ್ಣನವರ ಅಮೃತವಾಣಿ—ಅ. ನ. ಕೃಷ್ಣರಾಯ | ೨ | ೪ | ೦ |
| ೨. ಪಾಪಪುಣ್ಯ (ಸಣ್ಣ ಕಥೆಗಳು)— | ೧ | ೪ | ೦ |
| ೩. ಪ್ರಗತಿಶೀಲ ಸಾಹಿತ್ಯ—ಸಂ: ಅ. ನ. ಕೃಷ್ಣರಾಯ | ೧ | ೦ | ೦ |
| ೪. ಕಾಮನ ಬಿಲ್ಲು— ,, | (ತೀರಿವೆ) | | |
| ೫. ಎರಡು ನಾಟಕಗಳು— | ೦ | ೮ | ೦ |
| ೬. ಕರ್ನಾಟಕ ಗತವೈಭವ—ಆಲೂರ ವೆಂಕಟರಾಯ | ೧ | ೮ | ೦ |
| ೭. ಕರ್ನಾಟಕ ವೀರರತ್ನಗಳು ,, | ೧ | ೮ | ೦ |
| ೮. ನನ್ನ ನಲ್ಲ—ಮಧುರ ಚೆನ್ನ | ೦ | ೧೦ | ೦ |
| ೯. ಅಶಾಂತಿಪರ್ವ—ಆನಂದಕಂದ (ದ್ವಿತೀಯ ಮುದ್ರಣ) | ೨ | ೪ | ೦ |
| ೧೦. ಲೀಲಾವತಿ ಪ್ರಬಂಧ—ಪ್ರೊ. ಕೆ. ಜಿ. ಕುಂದಣಗಾರ | ೦ | ೧೨ | ೦ |
| ೧೧. ಅಭಿನವ ಪಂಪ—ಕರ್ನಾಟಕ ಸಂಘ ಧಾರವಾಡ. | ೧ | ೪ | ೦ |
| ೧೨. ತಮಿಳು ಕಥೆಗಳು—ಸಂ. ಸಿದ್ಧವನಹಳ್ಳಿ ಕೃಷ್ಣಶರ್ಮ | ೦ | ೧೨ | ೦ |
| ೧೩. ತೆಲುಗು ಕಥೆಗಳು— ,, | ೦ | ೮ | ೦ |
| ೧೪. ಅಸಾಮಿ ಕಥೆಗಳು— ,, | ೦ | ೮ | ೦ |
| ೧೫. ಸಂಧ್ಯಾರಾಗ—ಅ. ನ. ಕೃಷ್ಣರಾಯ (ತೃತೀಯ ಮುದ್ರಣ) | (ಅಚ್ಚಿನಲ್ಲಿದೆ) | | |
| ೧೬. ಸಾಹಿತ್ಯ ಮತ್ತು ಜೀವನ—ಅ, ನ, ಕೃಷ್ಣರಾಯ | ೧ | ೮ | ೦ |

## ಇತರ ಪ್ರಕಟಣೆಗಳು

| | | | |
|---|---|---|---|
| ೧. ಕಾಮನ ಸೋಲು—ಅ. ನ. ಕೃಷ್ಣರಾಯ | ೧ | ೦ | ೦ |
| ೨. ಸಂಘಃಕಾಲ—ಶ್ರೀರಂಗ | ೧ | ೦ | ೦ |
| ೩. ಕಂತಕೇಶ್ವರ—ದೇಸಾಯಿ ಪಾಂಡುರಂಗರಾಯ | ೧ | ೦ | ೦ |
| ೪. ರತ್ನಸಿಂಹಾಸನ—ಮ, ನ, ಮೂರ್ತಿ | ೦ | ೧೨ | ೦ |
| ೫. ವೀರಶೈವ ಸಾಹಿತ್ಯ ಮತ್ತು ಸಂಸ್ಕೃತಿ—ಅ. ನ. ಕೃಷ್ಣರಾಯ | ೨ | ೦ | ೦ |
| ೬. ಶಿವನ ಸೋಲು—ಅಮರವಾಣಿ | ೦ | ೧೨ | ೦ |
| ೭. ಭಾರತ ಶಕ್ತಿ—ಕುಮಾರ ವೆಂಕಣ್ಣ | ೦ | ೩ | ೦ |
| ೮. ರಷ್ಯಾದ ಮುನ್ನಡೆ— | ೦ | ೮ | ೦ |
| ೯. ಅಖಂಡೇಶ್ವರ ವಚನಗಳು— | ೨ | ೮ | ೦ |
| ೧೦. ಆತ್ಮಾರ್ಪಣ—ರಾಮಾನಂದ | ೧ | ೮ | ೦ |
| ೧೧. ಸಾಹಿತ್ಯರತ್ನ—ಅ. ನ. ಕೃಷ್ಣರಾಯ | ೩ | ೦ | ೦ |

**ಕರ್ನಾಟಕ ಸಾಹಿತ್ಯ ಮಂದಿರ, ಧಾರವಾಡ.**

# ನಮ್ಮ ಹೊಸ ಪ್ರಕಟನೆಗಳು

## ಸಾಹಿತ್ಯ ಮತ್ತು ಜೀವನ : ಅ. ನ. ಕೃಷ್ಣರಾಯ

ಈ ಎರಡು ದಶಕಗಳ ಕನ್ನಡ ಸಾಹಿತ್ಯದ ಸಿಂಹಾವಲೋಕನ. ವಿವಿಧ ರಸ ವಿಷಯಗಳ ರಸಾಯನ.

ಬೆಳೆಯುತ್ತಿರುವ ಕನ್ನಡ ಸಾಹಿತ್ಯ—ಕನ್ನಡ ನಾಡಿಗೆ ಬೇಕಾದ ಸಾಹಿತ್ಯ—ಹಳ್ಳಿಗಳಲ್ಲಿ ಕರ್ನಾಟಕ ಸಂಘಗಳು—ಹೆಣ್ಣುಮಕ್ಕಳ ಹಾಡುಗಳು—ವಿಮರ್ಶಕ—ಲಕ್ಷ್ಮೀಶನ ಸೀತಾರಾಮರು. ಕನ್ನಡದಲ್ಲಿ ಸಣ್ಣ ಕಥೆಗಳು—ಹಾಸ್ಯರಸ—ಕನ್ನಡ ಸಾಹಿತ್ಯದಲ್ಲಿ ಹಾಸ್ಯ—ನಾಟಕ—ಸಾಮಾಜಿಕ ನಾಟಕ—ರವೀಂದ್ರರ ನಾಟಕಗಳು.

ಬೆಲೆ ರೂ. ೧—೮—೦

## ಪ್ರಗತಿಶೀಲ ಸಾಹಿತ್ಯ : ಸಂ: ಅ. ನ. ಕೃಷ್ಣರಾಯ

ಸಾಹಿತ್ಯ, ಜೀವನ, ಧರ್ಮ, ಲಿಂಗದ ಬಗ್ಗೆ ಪ್ರಗತಿಶೀಲ ಲೇಖಕರ ವಿಚಾರ ಸರಣಿ. ಹಳ್ಳಿಗರ ಶ್ರಮಜೀವಿಗಳ ಸಮಸ್ಯೆಗಳ ಕೂಲಂಕಷ ಚರ್ಚೆ. ಕನ್ನಡ ಸಾಹಿತ್ಯದ ಪ್ರಗತಿಶೀಲ ಮುನ್ನೋಟದ ಕೈಪಿಡಿ. ಈ ವರ್ಷದ ಮಹತ್ವದ ಪ್ರಕಟನೆ.

ಬೆಲೆ ರೂ. ೧—೦—೦

## ಶ್ರೀ ಬಸವಣ್ಣನವರ ಅಮೃತವಾಣಿ: ಅ. ನ. ಕೃಷ್ಣರಾಯ

೧. ಕಾರಣಪುರುಷರಾದ ಶ್ರೀ ಬಸವಣ್ಣನವರ ಅಮಾನುಷ ಜೀವನ.
೨. ಬಸವಣ್ಣನವರ ಅಮೃತವಾಣಿ: ಆಣಿಮುತ್ತುಗಳಂತಹ ೨೦೦ ವಚನಗಳ ಆಯ್ಕೆ.
೩. ಬಸವಣ್ಣನವರ ಗುಣಗಾನ.
೪. ಜಗಜ್ಜ್ಯೋತಿಗಳಲ್ಲಿ ಬಸವಣ್ಣನವರ ಸ್ಥಾನ.

ಸರ್ವ ಧರ್ಮದವರಿಗೂ ಹಿತವೆನಿಸುವ ಗ್ರಂಥ.

ಬೆಲೆ ರೂ. ೨—೪—೦

## ಪಾಪಪುಣ್ಯ : ಹನ್ನೆರಡು ರಸಭರಿತ ಸಣ್ಣ ಕತೆಗಳು : ಅ. ನ. ಕೃಷ್ಣರಾಯ

ಕಪ್ಪು ಮೋಡ—ಹಳದಿಯ ಬಾಗಿಲು—ಜ್ವಾಲೆ—ಸುಖಕ್ಕೆ ಸುಂಕ—ಪತಿತೆ—ಅಳಿಯ—ಡಿಕ್ರೂಸರ ಮೀಸೆ—ವಿಷಕನ್ಯೆ—ಬಾಬಮ್ಮ—ಕರೆಯುವ ಕಣ್ಣು—ಕಾಲಕೂಟ—ಸ್ವಪ್ನ ಭಂಗ.

... ಸ.ಶೆ.ಯನ್ನು ಚರ್ಚಿಸುವ ಪ್ರಬಂಧ ಅನುಬಂಧದಲ್ಲಿ ಸೇರಿದೆ.

... ೧—೪—೦

